CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೦೪ (ಭಾದ್ರಪದ ೪, ಶಕ ವರ್ಷ ೧೯೨೬) | ಸಂಚಿಕೆ ೩೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಶಿಕ್ಷಣ ಸಚಿವಾಲಯ

**ವಿಷಯ:** ಕೆ.ಎ.ಟಿ. ಅರ್ಜಿಸಂಖ್ಯೆ.8155/2001, ಶ್ರೀ ಪಿ. ಗಣಪತಿ ಭಟ್, ನಿವೃತ್ತ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು ವಿರುದ್ಧ ಸರ್ಕಾರ ಹಾಗೂ ಇತರರು

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ.ಇಡಿ 75 ಡಿಪಿಐ 95, ದಿ.24.3.95
2. ಕೆ.ಎ.ಟಿ. ಅರ್ಜಿ ಸಂಖ್ಯೆ.8155/2001, ದಿನಾಂಕ:28.9.2001
3. ಕೆ.ಎ.ಟಿ. ತೀರ್ಪಿನ ದಿನಾಂಕ:12.6.2003.
4. ಶ್ರೀ ಗಣಪತಿಭಟ್ ಇವರ ಪರ ವಕೀಲರು ನೀಡಿದ ನೋಟೀಸ್ ದಿ.24.12.03.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ:24.3.95ರ ಅಧಿಸೂಚನೆಯಲ್ಲಿ ಶ್ರೀ ಎಂ.ಎನ್. ಪುಟ್ಟಾಚಾರ್, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಉಪನಿರ್ದೇಶಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಇವರಿಗೆ ಕೆ.ಸಿ.ಎಸ್. (ಆರ್‌ಪಿ) ನಿಯಮಗಳ 1978ರ ನಿಯಮ 2(ಸಿ) ಪ್ರಕಾರ ದಿನಾಂಕ: 5.1.1989 ರಿಂದ ಪೂರ್ವಾನ್ವಯವಾಗಿ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿದೆ. ಸದರಿಯವರಿಗಿಂತ ಜೇಷ್ಠತೆಯಲ್ಲಿ ತಾವು ಹಿರಿಯರಾಗಿರುವುದರಿಂದ, ಶ್ರೀ ಎಂ.ಎನ್. ಪುಟ್ಟಾಚಾರಿಯವರಿಗೆ ಬಡ್ತಿ ನೀಡಲಾದ ದಿನಾಂಕದಿಂದ ಪೂರ್ವಾನ್ವಯವಾಗಿ ವಿಭಾಗೀಯ ದೈಹಿಕ ಅಧೀಕ್ಷಕರ ಹುದ್ದೆಗೆ ಪದೋನ್ನತಿ ನೀಡುವಂತೆ ಮೇಲೆ ಓದಲಾದ (2) ದಿನಾಂಕ:20.9.2001ರಂದು ಸಲ್ಲಿಸಲಾದ ಕೆ.ಎ.ಟಿ. ಅರ್ಜಿಯಲ್ಲಿ ಶ್ರೀ ಗಣಪತಿಭಟ್ (ನಿವೃತ್ತಿ) ಇವರು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಕೆ.ಎ.ಟಿ. ಅರ್ಜಿಯ ಮೇಲೆ ದಿನಾಂಕ:12.6.2003ರಂದು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತೀರ್ಪು ನೀಡಿದ್ದು ಸದರಿ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

"The applicant may make representation bringing it to the notice of the respondent, the circumstances and the fact that he is shown as senior to Puttachar and with a request to consider his case within 30 days from today in which event Respondent 1 to 3 shall consider the representation in the light of the observations made during the course of the order within 2 months thereafter".

ಮೇಲೆ ಓದಲಾದ (4)ರ ದಿನಾಂಕ:24.12.2003ರ ಮನವಿಯಲ್ಲಿ ಶ್ರೀ ಗಣಪತಿಭಟ್ ಇವರ ಪರ ದಿನಾಂಕ:24.12.2003ರಂದು ಶ್ರೀ ರಂಗನಾಥ ಎಸ್. ಜೋಯಿಸ್ ವಕೀಲರು, ಶ್ರೀ ಪುಟ್ಟಾಚಾರ್ ಇವರಿಗೆ ನೀಡಲಾದ ದಿನಾಂಕದಿಂದ ಶ್ರೀ ಗಣಪತಿಭಟ್ ಇವರಿಗೆ ಪೂರ್ವಾನ್ವಯ ಬಡ್ತಿ ನೀಡುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ870ಡಿಪಿಐ2001 ಬೆಂಗಳೂರು ದಿ: 4ನೇ ಜುಲೈ2004**

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಪಿನ ಹಿನ್ನಲೆಯಲ್ಲಿ ಶ್ರೀ.ಗಣಪತಿಭಟ್ ಇವರ ಪರ ಶ್ರೀ.ರಂಗನಾಥ ಎಸ್.ಜೋಯಿಸ್, ವಕೀಲರು ಸಲ್ಲಿಸಿದ ದಿ:24-12-2003ರ ಮನವಿಯನ್ನು ಪರಿಶೀಲಿಸಲಾಯಿತು.

ಶ್ರೀ.ಗಣಪತಿಭಟ್ ಹಾಗೂ ಶ್ರೀ.ಎಂ.ಎನ್.ಪುಟ್ಟಾಚಾರ್ ಇವರುಗಳಿಗೆ ದಿನಾಂಕ: 19-4-91ರ ಸರ್ಕಾರದ ಅಧಿಸೂಚನೆ ಸಂಖ್ಯೆ:ಇ ಡಿ 503 ಡಿಪಿಐ 84ರಲ್ಲಿ, ದಿನಾಂಕ:17-10-78 ರಿಂದ ಜಿಲ್ಲಾ ದೈಹಿಕ ಅಧೀಕ್ಷಕರ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ

ನೀಡಲಾಗಿದೆ. ತದನಂತರ ಶ್ರೀ.ಎಂ.ಎನ್.ಪುಟ್ಟಾಚಾರ್ ಇ ವರು ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರ ಹುದ್ದೆಯಲ್ಲಿ ದಿನಾಂಕ:26.12.77ರಿಂದ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದುದರಿಂದ,ಈ ರೀತಿ ಕಾರ್ಯನಿರ್ವಹಿಸುತ್ತಿದ್ದವರಲ್ಲಿ ಶ್ರೀ.ಎಂ.ಎನ್.ಪುಟ್ಟಾಚಾರ್ ಇ ವರು ಜೂನ್ 1976ರಲ್ಲಿ ಅವರಿಗಿಂತ ಜೇಷ್ಟತೆಯಲ್ಲಿ ಹಿರಿಯವರಾದ ಶ್ರೀ.ಗಣಪತಿಭಟ್ ಇ ವರು ಜೂನ್ 77ರಲ್ಲಿ ಇ ಲಾಖಾ ಸೇವಾ ಪರೀಕ್ಷೆ ಪಾಸು ಮಾಡಿದ್ದರು. ಆದ್ದರಿಂದ ಕ.ನಾ.ಸೇ (ಆರ್.ಪಿ.ಪಿ) ನಿಯಮಗಳು 1978ರ ನಿಯಮ 2(3)ರ ಪ್ರಕಾರ ದಿನಾಂಕ:17-10-78ರ ಬದಲಾಗಿ 26-12-77 ರಿಂದ ಪೂರ್ವಾನ್ವಯ ಬಡ್ತಿ ನೀಡಿ ದಿ:19-4-91ರ ಸರ್ಕಾರಿ ಅಧಿಸೂಚನೆ ಸಂಖ್ಯೆ:ಇ ಡಿ503 ಡಿಪಿಐ 84ಕ್ಕೆ ತಿದ್ದೋಲೆ ಹೊರಡಿಸಿದೆ. ಈ ತಿದ್ದುಪಡಿ ಆಧಾರದ ಮೇಲೆ ದಿನಾಂಕ:10-2-95ರ ತಿದ್ದೋಲೆ ಸಂಖ್ಯೆ:ಇ ಡಿ388 ಡಿಪಿಐ 93ರಲ್ಲಿ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರ ಜೇಷ್ಟತಾ ಪಟ್ಟಿ ಪ್ರಕಟಿಸಿರುವ ದಿ:8-7-87ರ ಸರ್ಕಾರ ಆದೇಶ ಸಂಖ್ಯೆ:ಇ ಡಿ239 ಡಿಪಿಐ83ರ ಜೇಷ್ಟತಾ ಪಟ್ಟಿಯ ಕ್ರಮಸಂಖ್ಯೆ:30ರಲ್ಲಿರುವ ಶ್ರೀ.ಎಂ.ಎನ್.ಪುಟ್ಟಾಚಾರ್ ಇ ವರ ಜೇಷ್ಟತೆಯನ್ನು 12`ಎ' ಎಂದು ನಿಗದಿಪಡಿಸಲಾಗಿದೆ.

ಈ ಆಧಾರದ ಮೇಲೆ ದಿ:18-11-92ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇ ಡಿ553 ಡಿಪಿಐ 91ರಲ್ಲಿ ವಿಭಾಗೀಯ ಅಧೀಕ್ಷಕರ ಜೇಷ್ಟತಾ ಪಟ್ಟಿ ಪ್ರಕಟಿಸಿದ್ದು, ಸದರಿ ಜೇಷ್ಟತಾ ಪಟ್ಟಿಯ ಕ್ರಮಸಂಖ್ಯೆ.12`ಎ'ನಲ್ಲಿರುವ ಶ್ರೀ.ಎಂ.ಎನ್.ಪುಟ್ಟಾಚಾರ್ ಇ ವರ ಜೇಷ್ಟತೆಯನ್ನು 7ಎ ಎಂದು ಹಾಗೂ ದಿನಾಂಕ:2-1-95ರ ಸರ್ಕಾರಿ ಅಧಿಸೂಚನೆ ಸಂಖ್ಯೆ:ಇ ಡಿ113 ಡಿಪಿಐ93ರಲ್ಲಿ ಪ್ರಕಟಿಸಿರುವ ಉಪ ನಿರ್ದೇಶಕರು (ದೈ.ಶಿ) ಜೇಷ್ಟತೆಯಲ್ಲಿ 7`ಎ'ನಲ್ಲಿರುವ ಅವರ ಹೆಸರನ್ನು 4ಎ ನಿಗದಿಪಡಿಸಿದೆ.

ಇ ದರಿಂದಾಗಿ ಕ.ನಾ.ಸೇ. (ಆರ್.ಪಿ.ಪಿ)ನಿಯಮಗಳು 1978ರ ನಿಯಮ2(ಸಿ) ಪ್ರಕಾರ ದಿ:5-1-89ರಿಂದ ಪೂರ್ವಾನ್ವಯವಾಗಿ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರ ಹುದ್ದೆಗೆ ದಿ:24-3-1995 ಸರ್ಕಾರಿ ಅಧಿಸೂಚನೆ ಸಮಸಂಖ್ಯೆ:ಇ ಡಿ75 ಡಿಪಿಐ95ರಲ್ಲಿ ಪೂರ್ವಾನ್ವಯವಾಗಿ ಪದೋನ್ನತಿ ನೀಡಿದೆ. ಅನಂತರ ಅದೇ ಅಧಿಸೂಚನೆ ಸಂಖ್ಯೆಯ ದಿ:10-1-94 ರಿಂದ ಉಪ ನಿರ್ದೇಶಕರು, (ದೈಹಿಕ ಶಿಕ್ಷಣ) ಹುದ್ದೆಗೆ ಪದೋನ್ನತಿ ನೀಡಿದೆ.

ಮೇಲೆ ವಿವರಿಸಲಾಗಿರುವ ಕಾರಣಗಳಿಂದಾಗಿ ಶ್ರೀ.ಗಣಪತಿಭಟ್ ಇ ವರು ಶ್ರೀ.ಎಂ.ಎನ್.ಪುಟ್ಟಾಚಾರ್ ಇ ವರಿಗಿಂತ ಜೇಷ್ಟತೆಯಲ್ಲಿ ಕಿರಿಯವರಾಗಿರುವುದರಿಂದ ಸದರಿಯವರಿಗೆ ನೀಡಲಾದ ದಿನಾಂಕದಿಂದ ವಿಭಾಗೀಯ ದೈಹಿಕಶಿಕ್ಷಣ ಅಧೀಕ್ಷಕರು ಹಾಗೂ ಉಪ ನಿರ್ದೇಶಕರು (ದೈಹಿಕ ಶಿಕ್ಷಣ) ಹುದ್ದೆಗೆ ಪೂರ್ವಾನ್ವಯ ಬಡ್ತಿ ನೀಡಲು ಕೋರಿರುವ ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 833

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ, (ಸೇವೆಗಳು1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯಃ 2004-2005ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜಿನ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಕೋರ್ಸಿಗೆ ನಿಯೋಜನೆ.

ಓದಲಾಗಿದೆಃ
1. ತಾಃ 05.11.2003 ಸಂಖ್ಯೆಃ ಆಕುಕ 111 ಎಂಪಿಎಸ್ 2003ರ ಸರ್ಕಾರಿ ಆದೇಶ
2. ತಾಃ 26.02.2004 ಮತ್ತು 17.03.2004 ಸಂಖ್ಯೆಃ ಎಂಇಹೆಚ್ (3)ಃ 33ಃ2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರಗಳು
3. ತಾಃ 24.06.2004 ಮತ್ತು 23.07.2004ರ ಸಂಖ್ಯೆಃ ಎಂಇಹೆಚ್ (2)ಃ5ಃ2004-05ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರಗಳು

ಪೀಠಿಕೆಃ

೧. 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಡಿಪ್ಲೋಮೋ ಕೋರ್ಸುಗಳ ಪ್ರವೇಶಕ್ಕೆ ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ 10ನೇ ನಿಯಮದೊಂದಿಗೆ ಓದಲಾದ 12ನೇ ನಿಯಮದಡಿ ಸರ್ಕಾರಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಸೇವಾ ನಿರತರಾದ ಸ್ನಾತಕೋತ್ತರ ಪದವಿ ಪಡೆಯದೆ ಇರುವ ಉಪನ್ಯಾಸಕರುಗಳನ್ನು ನಿಯೋಜಿಸಲು ಅವಕಾಶ ಕಲ್ಪಿಸಲಾಗಿದೆ. ತಾರೀಖುಃ 28-7-2003ರ ಅಧಿಸೂಚನೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳಿಗೆ ಶೇಕಡ 20 ರಷ್ಟು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳಲ್ಲಿ ಮತ್ತು ಶೇಕಡ 8 ರಷ್ಟು ಸ್ನಾತಕೋತ್ತರ ದಂತ ಕೋರ್ಸುಗಳಲ್ಲಿ ಸೀಟುಗಳನ್ನು ಕಾಯ್ದಿರಿಸಲಾಗಿದೆ.

೨. ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಮೇಲ್ಕಂಡ ವೈದ್ಯಕೀಯ ಕಾಲೇಜುಗಳಲ್ಲಿ ನೇರ ನೇಮಕಾತಿ ಮೂಲಕ ನೇಮಕಗೊಂಡ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ಕೋರ್ಸಿಗೆ ನಿಯೋಜಿಸಲು ಅನುವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್-II-A –I (1) ಮತ್ತು (4) ನೇ ನಿಯಮವನ್ನು ಸಡಿಲಿಸಿ ಒಟ್ಟಾರೆ ಮೂರು ಉಪನ್ಯಾಸಕರುಗಳನ್ನು ಅವರುಗಳು ಕನಿಷ್ಟ 10 ವರ್ಷಗಳ ಸೇವೆಯನ್ನು ಕರ್ನಾಟಕ ರಾಜ್ಯ ನಾಗರೀಕ ಸೇವೆಯ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಸಲ್ಲಿಸಬೇಕು ಎಂಬ ಷರತ್ತಿನೊಂದಿಗೆ ಹಾಗೂ ಇನ್ನಿತರ ಷರತ್ತುಗಳಿಗೆ ಬದ್ದಗೊಳಿಸಿ ನಿಯೋಜಿಸಲು ಅನುವು ಮಾಡಿಕೊಡಲಾಗಿದೆ. ಅದಕ್ಕೆ ಪೂರಕವಾದ ಸೀಟ್ ಮ್ಯಾಟ್ರಿಕ್ಸ್‌ನ್ನು ತಾರೀಖುಃ 16.04.2004 ಸಂಖ್ಯೆಃ ಆಕುಕ 10 ಎಂಪಿಎಸ್ 2004ರ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿದೆ. ಅದರಂತೆ ಸೇವಾನಿರತ ಅರ್ಹ ಅಭ್ಯರ್ಥಿಗಳನ್ನು ಕೌನ್ಸಿಲಿಂಗ್ ಮೂಲಕ ತಾರೀಖುಃ 23 ಮತ್ತು 24ನೇ ಏಪ್ರಿಲ್ 2004 ರಂದು ಆಯ್ಕೆ ಮಾಡಲಾಯಿತು. ಅವರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳಿಗೆ ನಿಯೋಜಿಸಲು ಅಧಿಸೂಚನೆ ಹೊರಡಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

೩. ತಾರೀಖುಃ 08.01.2004ರ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿಸೂಚನೆಗಳಲ್ಲಿ ಸ್ನಾತಕೋತ್ತರ ವೈದ್ಯಕೀಯ ಪದವಿ ಮತ್ತು ಡಿಪ್ಲೋಮೋ ಕೋರ್ಸುಗಳಿಗೆ ಹಾಗೂ ಸ್ನಾತಕೋತ್ತರ ದಂತ ಪದವಿ ಕೋರ್ಸುಗಳಿಗೆ ಪ್ರವೇಶ ಪಡೆಯಲು ತಾರೀಖುಃ 30.04.2004ನ್ನು ಕಡೇ ದಿನಾಂಕ ಎಂದು ನಿಗದಿಗೊಳಿಸಲಾಗಿದೆ. ಆದ್ದರಿಂದ ತ್ವರಿತವಾಗಿ ಸರ್ಕಾರಿ ಆದೇಶ ಹೊರಡಿಸಲು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

೪. ಪ್ರಸ್ತಾಪಿತ ಮೂರು ಉಪನ್ಯಾಸಕರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್- II-A-I ರ ಅನ್ವಯ 5 ವರ್ಷಗಳ ಸೇವೆಯನ್ನು ಪೂರೈಸಿರುವುದಿಲ್ಲವಾದರೂ ಅವರುಗಳ ಖಾಯಂ ಪೂರ್ವಾ ಅವಧಿಯನ್ನು ಘೋಷಿಸಲಾಗಿರುತ್ತದೆ. ಅಂತಹ ಅಭ್ಯರ್ಥಿಗಳ ಪೈಕಿ 2ವರ್ಷಗಳ ಸೇವೆಯನ್ನು ಪೂರೈಸಿರುವವರನ್ನು ವ್ಯಾಸಂಗಕ್ಕೆ ನಿಯೋಜಿಸುತ್ತಿರುವುದರಿಂದ ಅವರುಗಳಿಗೆ 3ವರ್ಷಗಳ ಬದಲಾಗಿ 10ವರ್ಷಗಳ ಕಾಲ ಸರ್ಕಾರಿ ಸೇವೆಯಲ್ಲಿರುವುದಾಗಿ ಬಾಂಡ್ ತೆಗೆದುಕೊಳ್ಳುವುದರೊಂದಿಗೆ ಸ್ನಾತಕೋತ್ತರ ವ್ಯಾಸಂಗದ ಜೊತೆಗೆ ಉಪನ್ಯಾಸಕರ ಹುದ್ದೆಯ ಕರ್ತವ್ಯವನ್ನು ನಿರ್ವಹಿಸುವುದಕ್ಕೆ ಬದ್ದಗೊಳಿಸಿ ಆರ್ಥಿಕ ಇಲಾಖೆ ಸಹಮತಿಸಿದೆ. ಅಲ್ಲದೆ ಅಂತಹ ಮೂರು ಉಪನ್ಯಾಸಕರುಗಳಿಗೆ ಸೀಮಿತಗೊಳಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್- II-A-I ನೇ ನಿಯಮದ (1) ನೇ ಉಪನಿಯಮವನ್ನು ಸಡಿಲಿಸಿ ಉಳಿದಂತೆ ಅದೇ ನಿಯಮದಡಿಯಲ್ಲಿರುವ ಎಲ್ಲಾ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆರ್ಥಿಕ ಇಲಾಖೆ ಸಹಮತಿಸಿದೆ.

ಸರ್ಕಾರಿ ಆದೇಶ ಸಂಖ್ಯೆ: ಆಕುಕ 186 ಎಂಪಿಎಸ್ 2004 ಬೆಂಗಳೂರು ದಿನಾಂಕ: 24ನೇ ಜುಲೈ 2004

೫. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 61ನೇ ನಿಯಮ ಹಾಗೂ ಅಪೆಂಡಿಕ್ಸ್-II-A-I ನೇ ನಿಯಮದೊಂದಿಗೆ ಓದಲಾದ 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಮತ್ತು ಡಿಪ್ಲೋಮೋ ಕೋರ್ಸುಗಳ ಪ್ರವೇಶಕ್ಕಾಗಿ, ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ 10 ಮತ್ತು 12ನೇ ನಿಯಮದ ಪ್ರಕಾರ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜಿನ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ಈ ಕೆಳಕಂಡ ಮೂವರು ಉಪನ್ಯಾಸಕರುಗಳನ್ನು ಪ್ರತಿಯೊಬ್ಬರ ಹೆಸರಿನ ಮುಂದೆ ನಿರ್ದಿಷ್ಟಪಡಿಸಿರುವ ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸಿಗೆ ಮತ್ತು ಕಾಲೇಜಿಗೆ 2004-2005ನೇ ಶೈಕ್ಷಣಿಕ ವರ್ಷದಲ್ಲಿ ನಿಯೋಜಿಸಲಾಗಿದೆ. ಅವರುಗಳ ನಿಯೋಜನೆಯು ಮೇಲ್ಕಂಡ 61ನೇ ನಿಯಮದೊಂದಿಗೆ ಓದಲಾದ ಅಪೆಂಡಿಕ್ಸ್-II-A-I-9 ನೇ ನಿಯಮದೊಂದಿಗೆ ಓದಲಾದ 19ನೇ ನಮೂನೆಯಲ್ಲಿರುವ ಕರಾರು ಪತ್ರದ ಬಾಂಡಿನಲ್ಲಿ ನಮೂದಿಸಿರುವ ಮೂರು ವರ್ಷಗಳ ಅವಧಿಯನ್ನು ಮಾರ್ಪಡಿಸಿ ಹತ್ತು ವರ್ಷಗಳು ಎಂದು ನಿರ್ದಿಷ್ಟಪಡಿಸಲಾಗಿದೆ.

| ಕ್ರಮ ಸಂಖ್ಯೆ | ಆಯ್ಕೆ ಜೇಷ್ಟತಾ ಸಂಖ್ಯೆ | ಉಪನ್ಯಾಸಕರ ಹೆಸರು ಹುದ್ದೆಯ ಪದನಾಮ ಮತ್ತು ಕಾಲೇಜು | ನಿಯೋಜಿಸಲ್ಪಟ್ಟ ಸ್ನಾತಕೋತ್ತರ ವೈದ್ಯಕೀಯ ಕೋರ್ಸು ಮತ್ತು ಕಾಲೇಜು | ಪ್ರವರ್ಗ |
|---|---|---|---|---|
| 01 | 01 | ಡಾ: ಎಂ.ಬಿ.ರಾಮಮೂರ್ತಿ<br>ರೋಗನಿರೋಧಕ ಹಾಗೂ ಸಾಮಾಜಿಕ ವೈದ್ಯಶಾಸ್ತ್ರ ಉಪನ್ಯಾಸಕರು ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ಎಂಡಿ (ಪಿ ಅಂಡ್ ಎಸ್ ಎಂ)<br>ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ಸಾಮಾನ್ಯ ವರ್ಗ |
| 02 | 02 | ಡಾ: ಹೆಚ್.ಬಿ. ಶಶಿಧರ್<br>ರೋಗಲಕ್ಷಣಶಾಸ್ತ್ರ ಉಪನ್ಯಾಸಕರು<br>ಮೈಸೂರು ವೈದ್ಯಕೀಯ ಕಾಲೇಜು ಮೈಸೂರು | ಎಂಡಿ ಪೆಥಾಲಜಿ<br>ಮೈಸೂರು ವೈದ್ಯಕೀಯ ಕಾಲೇಜು ಮೈಸೂರು | ಸಾಮಾನ್ಯ ವರ್ಗ |
| 03 | 03 | ಡಾ: ಎಸ್.ಎನ್. ಪುರುಷೋತ್ತಮ್<br>ಶರೀರಕ್ರಿಯಾಶಾಸ್ತ್ರ ಉಪನ್ಯಾಸಕರು<br>ಮೈಸೂರು ವೈದ್ಯಕೀಯ ಕಾಲೇಜು ಮೈಸೂರು | ಎಂಡಿ ಫಿಜಿಯಾಲಜಿ<br>ಮೈಸೂರು ವೈದ್ಯಕೀಯ ಕಾಲೇಜು ಮೈಸೂರು | ಸಾಮಾನ್ಯ ವರ್ಗ |

೬. ಮೇಲ್ಕಂಡ ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸುಗಳಿಗೆ ನಿಯೋಜಿಸುವ ಪೂರ್ವದಲ್ಲಿ ಪ್ರತಿಯೊಬ್ಬ ಉಪನ್ಯಾಸಕರಿಂದಲೂ ಛಾಪಾ ಕಾಗದದ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 19ನೇ ನಮೂನೆಯಲ್ಲಿರುವ ಬಾಂಡನ್ನು ದ್ವಿಪ್ರತಿಗಳಲ್ಲಿ ಪಡೆಯತಕ್ಕದ್ದು. ಅದರಲ್ಲಿ ಕನಿಷ್ಟ ಮೂರು ವರ್ಷಗಳ ಸೇವೆಯ ಬದಲು " ಕನಿಷ್ಟ ಹತ್ತು ವರ್ಷಗಳ ಸೇವೆ " ಎಂದು ನಮೂದಿಸತಕ್ಕದ್ದು. ಬಾಂಡಿನ ಒಂದು ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸಬೇಕು ಮತ್ತು ಇನ್ನೊಂದು ಪ್ರತಿಯನ್ನು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದಲ್ಲಿ ಶಾಶ್ವತವಾಗಿರುವಂತೆ ಸಂರಕ್ಷಿಸಬೇಕು. ಅವರನ್ನು ಕರ್ತವ್ಯದಿಂದ ವಿಮುಕ್ತಗೊಳಿಸುವ ಪೂರ್ವದಲ್ಲಿ ಅದನ್ನು ಪಡೆಯತಕ್ಕದ್ದು. ಅವರು ಈ ಹಿಂದೆ ನಿಯೋಜನೆ ಸೌಲಭ್ಯವನ್ನು ಪಡೆದಿರುವುದಿಲ್ಲ ಎಂಬುದನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಖಚಿತಪಡಿಸಿಕೊಳ್ಳಬೇಕು.

೭. ಮೇಲ್ಕಂಡ ಉಪನ್ಯಾಸಕರುಗಳನ್ನು ಅವರು ಕಾರ್ಯನಿರ್ವಹಿಸುತ್ತಿರುವ ಕಾಲೇಜಿನಲ್ಲಿ ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸಿನ ವ್ಯಾಸಂಗ ಮಾಡಲು ಆಯ್ಕೆ ಮಾಡತಕ್ಕದ್ದು. ಅವರು ಸ್ನಾತಕೋತ್ತರ ವಿದ್ಯಾರ್ಥಿ ಕಾಲಾವಧಿಯಲ್ಲಿ ಸಮವರ್ತಿತವಾಗಿ ಅವರು ಸೇವಾ ನಿರತರಾದ ಉಪನ್ಯಾಸಕರ ಹುದ್ದೆಯ ಕಾರ್ಯವನ್ನು ಸಮವರ್ತಿತವಾಗಿ ನಿರ್ವಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಅವರನ್ನು ಸ್ನಾತಕೋತ್ತರ ಕೋರ್ಸಿಗೆ ನಿಯೋಜಿಸುವುದರಿಂದ ಅವರ ಹುದ್ದೆ ತೆರವಾಗತಕ್ಕದ್ದಲ್ಲ ಮತ್ತು ಸದರಿ ಹುದ್ದೆಯನ್ನು ಭರ್ತಿ ಮಾಡತಕ್ಕದ್ದಲ್ಲ.

೮. ನಿಯೋಜಿಸಲ್ಪಟ್ಟ ಉಪನ್ಯಾಸಕರುಗಳು ಮೇಲ್ಕಂಡ KCSRs ನ ಉಪಬಂಧಗಳ ಅನುಸಾರ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ವೇತನ ಭತ್ಯೆ, ಮನೆಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯನ್ನು ಮಾತ್ರ ಪಡೆಯತಕ್ಕದ್ದು.

೯. ಆರ್ಥಿಕ ಇಲಾಖೆಯ ಸಹಮತಿಯನ್ನು ದಿನಾಂಕ: 10-7-1996 ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96ರ ಸರ್ಕಾರಿ ಆದೇಶದ ಅನುಸೂಚಿಯ 10ನೇ ಐಟಂ ಪ್ರಕಾರ ಹಾಗೂ ತಾರೀಖು: 17-04-2004 ಸಂಖ್ಯೆ: ಆಇ 655 ವೆಚ್ಚ-(5):2004 ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 834

ಎಸ್. ನಾಗರಾಜು

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ವಿಷಯಃ ದಾವಣಗೆರೆಯ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯ ಮುಖ್ಯಸ್ಥರಾದ 'ಶಸ್ತ್ರಚಿಕಿತ್ಸಕರು' ಪದನಾಮವನ್ನು 'ವೈದ್ಯಕೀಯ ಅಧೀಕ್ಷಕರು' ಎಂದು ಮರುಪದನಾಮೀಕರಣ

ಓದಲಾಗಿದೆಃ
1. ತಾಃ 04.02.2002 ಸಂಖ್ಯೆಃ ಮಮಆಃಸಿಶಾಃ77/2000-01 ರ ದಾವಣಗೆರೆಯ ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆಯ ಶಸ್ತ್ರ ಚಿಕಿತ್ಸಕರ ಪತ್ರ
2. ತಾಃ 11.06.2004 ಸಂಖ್ಯೆಃ ವಶ್ರೇಅ 95/2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ

ಪೀಠಿಕೆಃ

೧. ದಾವಣಗೆರೆಯ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯು 100 ಹಾಸಿಗೆಗಳ ಆಸ್ಪತ್ರೆಯಾಗಿದ್ದು, ವೈದ್ಯಕೀಯ ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಪ್ರಸ್ತುತ ಸದರಿ ಆಸ್ಪತ್ರೆಯ ಶಸ್ತ್ರಚಿಕಿತ್ಸಕರು ಆಸ್ಪತ್ರೆಯ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಆಡಳಿತಾತ್ಮಕ ಹಿತದೃಷ್ಟಿಯಿಂದ ಸ್ವತಂತ್ರವಾಗಿ ಕಾರ್ಯನಿರ್ವಹಿಸುವುದಕ್ಕೆ ಸದರಿ ಆಸ್ಪತ್ರೆಯ ಶಸ್ತ್ರಚಿಕಿತ್ಸಕರ ಪದನಾಮವನ್ನು 'ವೈದ್ಯಕೀಯ ಅಧೀಕ್ಷಕರು' ಎಂದು ಮರು ಪದನಾಮೀಕರಿಸಲು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

೨. ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಮತ್ತು ವಿಕ್ಟೋರಿಯಾ ಆಸ್ಪತ್ರೆಗಳಲ್ಲಿನ ಮತ್ತು ಮೈಸೂರಿನ ಕೆ.ಆರ್. ಆಸ್ಪತ್ರೆ ಮತ್ತು ಚೆಲುವಾಂಬ ಆಸ್ಪತ್ರೆಗಳಲ್ಲಿನ ಮುಖ್ಯಸ್ಥರ ಹುದ್ದೆಗಳನ್ನು ಈಗಾಗಲೇ 'ವೈದ್ಯಕೀಯ ಅಧೀಕ್ಷಕರು' ಎಂದು ಪದನಾಮೀಕರಿಸಿರುವುದರಿಂದ ದಾವಣಗೆರೆಯ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯ ಮುಖ್ಯಸ್ಥರಾದ ಶಸ್ತ್ರ ಚಿಕಿತ್ಸಕರು ಹುದ್ದೆಯನ್ನು 'ವೈದ್ಯಕೀಯ ಅಧೀಕ್ಷಕರು' ಎಂದು ಮರುಪದನಾಮೀಕರಿಸಲು ಸರ್ಕಾರ ನಿರ್ಧರಿಸಿದೆ.

ಸರ್ಕಾರಿ ಆದೇಶ ಸಂಖ್ಯೆಃ ಆಕುಕ 276 ಎಂಎಂಸಿ 2004, ಬೆಂಗಳೂರು, ದಿನಾಂಕ 26ನೇ ಜುಲೈ 2004

೩. ದಾವಣಗೆರೆಯ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯ ಮುಖ್ಯಸ್ಥರಾದ 'ಶಸ್ತ್ರಚಿಕಿತ್ಸಕರು' ಎಂಬ ಪದನಾಮದಿಂದ "ವೈದ್ಯಕೀಯ ಅಧೀಕ್ಷಕರು" ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಪುನರ್‌ಪದನಾಮೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್. ನಾಗರಾಜು
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 835

ವಿಷಯಃ ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನಿವೃತ್ತ ಶಸ್ತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾಃ ಆರ್. ಶ್ರೀನಾಥ್ ರವರಿಗೆ ಪ್ರಾವಿಷನಲ್ ಪೆನ್‌ಷನ್ ಮಂಜೂರಾತಿ

ಓದಲಾಗಿದೆಃ
1. ತಾಃ 06.02.2002, 04.04.2002, 06.11.2002 ಮತ್ತು 27.11.2002 ಸಂಖ್ಯೆಃ ಸಾದೂವಿ(ವೈಶಿ) 74ಃ2001-02ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರಗಳು
2. ತಾಃ 11.02.2002 ಸಂಖ್ಯೆಃ ಆಕುಕ 35 ಎಂಎಂಸಿ 2002ರ ಅಧಿಸೂಚನೆ
3. ತಾಃ 30.04.2002 ಸಂಖ್ಯೆಃ ಕಾಮ್ಪ್ಃಉಪಲೋಕ್ಃಎಂವೈಎಸ್-247ಃ2001-02ಃಪಿಪಿರ ಕರ್ನಾಟಕ ಲೋಕಾಯುಕ್ತ ರಿಜಿಸ್ಟ್ರಾರ್‌ರವರ ಪತ್ರ
4. ತಾಃ 24.05.2003 ಸಂಖ್ಯೆಃ ಲೋಕ್ಃಎಲ್‌ಸಿಃಡಿಇ-1:2003-04ರ ಕರ್ನಾಟಕ ಲೋಕಾಯುಕ್ತ ರಿಜಿಸ್ಟ್ರಾರ್‌ರವರ ಪತ್ರ
5. ತಾಃ 12.06.2003 ಸಂಖ್ಯೆಃ ಆಕುಕ 35 ಎಂಎಂಸಿ 2002ರ ಸರ್ಕಾರಿ ಆದೇಶ
6. ತಾಃ 12.06.2003 ಸಂಖ್ಯೆಃ ಆಕುಕ 35 ಎಂಎಂಸಿ 2002ರ ನೋಟೀಸ್
7. ತಾಃ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆಃ 33008-33011:2003
8. ತಾಃ 28.10.2003 ಸಂಖ್ಯೆಃ ಎಲ್‌ಒಕೆ-ಎಲ್‌ಸಿ-1:2003-04ರ ಕರ್ನಾಟಕ ಲೋಕಾಯುಕ್ತ ರಿಜಿಸ್ಟ್ರಾರ್‌ರವರ ಪತ್ರ
9. ತಾಃ 12.12.2003 ಸಂಖ್ಯೆಃ ಆಕುಕ 55 ಎಂಎಂಸಿ 2003ರ ಅಧಿಸೂಚನೆ
10. ತಾಃ 28.01.2004 ಸಂಖ್ಯೆಃ 48284ಃಜಿಎಃ03-04ರ ಸರ್ಕಾರಿ ವಕೀಲರ ಪತ್ರ
11. ತಾಃ13.04.2004 ಮತ್ತು 12.05.2004ರ ಕಿಮ್ಸ್‌ನ ನಿವೃತ್ತ ಶಸ್ತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕ ಡಾಃಆರ್. ಶ್ರೀನಾಥ್‌ರವರ ಪತ್ರಗಳು
12. ತಾಃ28.05.2004 ಸಂಖ್ಯೆಃ ಎಂಇಃಪಿಂಚಣಿಃ31ಃ2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
13. ತಾ:07.06.2004 ಸಂಖ್ಯೆಃ ಸಾದೂವಿ(ವೈಶಿ)ಃ19ಃ2004-05ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

ಪೀಠಿಕೆಃ

೧. ಮೈಸೂರು ವೈದ್ಯಕೀಯ ಕಾಲೇಜಿನ ಕೆ.ಆರ್. ಆಸ್ಪತ್ರೆಯಲ್ಲಿ ಒಳರೋಗಿಯಾಗಿದ್ದ ಶ್ರೀ ನಂಜೇಗೌಡರವರಿಗೆ ಹರ್ನಿಯಾ ಶಸ್ತ್ರಚಿಕಿತ್ಸೆಯನ್ನು ಮಾಡಲು ಉಂಟಾದ ವಿಳಂಬ ಮತ್ತು ನಿರ್ಲಕ್ಷತೆಯಿಂದ ಅವರು ಸಾವನ್ನಪ್ಪಿದ್ದರು. ಪೂರ್ವಭಾವಿ ವಿಚಾರಣೆಯನ್ನು ನಡೆಸಿ ಅದರ ವರದಿಯನ್ನಾಧರಿಸಿ ಮೈಸೂರು ವೈದ್ಯಕೀಯ ಕಾಲೇಜಿನ ಅಂದಿನ ಶಸ್ತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕ ಡಾಃಆರ್. ಶ್ರೀನಾಥ್ ಹಾಗೂ ಇನ್ನಿತರ ವೈದ್ಯಕೀಯ ಮತ್ತು ಅರೆವೈದ್ಯಕೀಯ 11 ಅಧಿಕಾರಿ - ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು 1957ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11 ಮತ್ತು 13ನೇ ನಿಯಮದಡಿ ಕರ್ನಾಟಕ ಲೋಕಾಯುಕ್ತದ ಅಡಿಷನಲ್ ರಿಜಿಸ್ಟ್ರಾರ್ ಆಫ್ ಎನ್‌ಕ್ವೈರೀಸ್-2 ರವರನ್ನು ವಿಚಾರಣಾ ಪ್ರಾಧಿಕಾರವಾಗಿ ನೇಮಿಸಿ ತಾಃ 12.06.2003ರ ಸರ್ಕಾರಿ ಆದೇಶದಲ್ಲಿ ಆಜ್ಞಾಪಿಸಲಾಗಿತ್ತು, ಅದರಿಂದ ಬಾಧಿತರಾದ ಡಾಃ

ಶಿವಾನಂದ, ಡಾ: ಆರ್. ಶ್ರೀನಾಥ್, ಡಾ:ಎಂ.ಎ.ಷರೀಫ್ ಮತ್ತು ಡಾ:ವೈ .ಶ್ರೀನಿವಾಸ್‌ರವರುಗಳು ಕ್ರಮಾಂಕ 33008-330011:2003ರ ರಿಟ್ ಅರ್ಜಿಗಳನ್ನು ದಾಖಲಿಸಿ ಜಂಟಿ ಇಲಾಖಾ ವಿಚಾರಣೆಯ ನಡವಳಿಗೆ ತಡೆಯಾಜ್ಞೆಯನ್ನು ಪಡೆದಿರುತ್ತಾರೆ. ತಡೆಯಾಜ್ಞೆ ಇನ್ನೂ ತೆರವಾಗಿರುವುದಿಲ್ಲ

೨. ಈ ಮಧ್ಯೆ ಡಾ: ಆರ್ ಶ್ರೀನಾಥ್ ರವರು 58 ವರ್ಷಗಳ ವಯೋನಿವೃತ್ತಿ ಮೇಲೆ ತಾ: 29.02.2004ರಂದು ಸೇವೆಯಿಂದ ನಿವೃತ್ತರಾದರು. ತಾ: 12.02.2003 ಸಂಖ್ಯೆ: ಆಕುಕ 55 ಎಂಎಂಸಿ 2003ರ ಅಧಿಸೂಚನೆಯಲ್ಲಿ ಅವರ ನಿವೃತ್ತಿ ದಿನಾಂಕವನ್ನು ಅಧಿಸೂಚಿಸುವಾಗ ಅವರ ವಿರುದ್ದ ಶಿಸ್ತಿನ ಕ್ರಮ ಬಾಕಿ ಇರುವುದರಿಂದ ಅವರ ನಿವೃತ್ತಿ ಸೌಲಭ್ಯಗಳನ್ನು ಸರ್ಕಾರ ಅಂತಿಮ ಆದೇಶ ಹೊರಡಿಸುವವರೆಗೆ ಪಿಂಚಣಿ ಸೌಲಭ್ಯಗಳನ್ನು ತಡೆಹಿಡಿಯುವಂತೆ ಮಹಾಲೇಖಪಾಲರಿಗೆ ಸೂಚಿಸಲಾಗಿತ್ತು.

೩. ನಿವೃತ್ತ ಶಸ್ತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕರಾದ ಡಾ: ಆರ್. ಶ್ರೀನಾಥ್‌ರವರು ಅರ್ಜಿಗಳನ್ನು ಸಲ್ಲಿಸಿ ಇಲಾಖಾ ವಿಚಾರಣೆ ಬಾಕಿ ಸಮಯದಲ್ಲಿ ಲಭ್ಯವಾಗುವ ಪ್ರಾವಿಷನಲ್ ಪಿಂಚಣಿಯನ್ನು ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿದ್ದಾರೆ.

೪. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214-ಎ ನಿಯಮದಡಿ ಯಾವುದೇ ನಿವೃತ್ತ ಸರ್ಕಾರಿ ನೌಕರರ ವಿರುದ್ದ ಇಲಾಖಾ ವಿಚಾರಣೆ ಬಾಕಿ ಇದ್ದಲ್ಲಿ ಮತ್ತು 214ನೇ ನಿಯಮದಡಿ ಅದನ್ನು ಮುಂದುವರಿಸಿದಲ್ಲಿ ಅದರ ಮೇಲೆ ಅಂತಿಮ ಆದೇಶವನ್ನು ಹೊರಡಿಸುವವರೆಗೆ ಅವರಿಗೆ ಲಭ್ಯವಾಗಬಹುದಾದ ಪಿಂಚಣಿಗೆ ಮೀರದಂತೆ ಪ್ರಾವಿಷನಲ್ ಪೆನ್‌ಷನ್ ಅನ್ನು ಮಂಜೂರು ಮಾಡಲು ಅವಕಾಶವಿದೆ. ಪ್ರಸ್ತುತ ಪ್ರಕರಣದಲ್ಲಿ ಅವರ ಕರ್ತವ್ಯ ನಿರ್ಲಕ್ಷತೆಗಾಗಿ ಇಲಾಖಾ ವಿಚಾರಣೆಯನ್ನು ಹೂಡಿರುವುದರಿಂದ ಮತ್ತು ಉಚ್ಚನ್ಯಾಯಾಲಯದ ತಡೆಯಾಜ್ಞೆಯಿಂದಾಗಿ ಅದು ಸ್ಥಗಿತಗೊಂಡಿರುವುದರಿಂದ ಅವರಿಗೆ ತಾ: 01.03.2004ರಿಂದ ಅನ್ವಯವಾಗುವಂತೆ ಪ್ರಾವಿಷನಲ್ ಪೆನ್‌ಷನ್ ಅನ್ನು ಮಂಜೂರು ಮಾಡಲು ಸರ್ಕಾರ ನಿರ್ಧರಿಸಿದೆ.

ಸರ್ಕಾರಿ ಆದೇಶ ಸಂಖ್ಯೆ: ಆಕುಕ 86 ಎಂಎಂಸಿ 2004, ಬೆಂಗಳೂರು, ದಿನಾಂಕ 26ನೇ ಜುಲೈ 2004

೫. ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇಲಿದ್ದು ನಿವೃತ್ತರಾದ ಶಸ್ತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕ ಡಾ:ಆರ್. ಶ್ರೀನಾಥ್ ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214-ಎ ನಿಯಮದಡಿ ಮತ್ತು ಸದರಿ ನಿಯಮದಡಿ ವಿಧಿಸಿರುವ ಷರತ್ತಿಗಳಿಗೊಳಪಟ್ಟು, ತಾ: 01.03.2004 ರಿಂದ ಅನ್ವಯವಾಗುವಂತೆ ಪ್ರಾವಿಷನಲ್ ಪೆನ್‌ಷನ್‌ನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 836

ಎಸ್. ನಾಗರಾಜು

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಜಿ. ಕೃಷ್ಣಮೂರ್ತಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ, ಬೆಂಗಳೂರು ನಗರ ಜಿಲ್ಲೆ ಹಾಗೂ ಹಾಲಿ ಅಧೀಕ್ಷಕರು, ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ಕಾರವಾರ, ಉತ್ತರ ಕನ್ನಡ ಜಿಲ್ಲೆ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಬಗ್ಗೆ ಕಾನೂನು ಕ್ರಮ ಜರುಗಿಸಲು ಮಂಜೂರಾತಿ ಕುರಿತು.

**ಓದಲಾಗಿದೆ:**
1. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಇವಿ (2)-15/2002-03 ದಿನಾಂಕ:14.11.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 57 ಮುನೋಸೇ (2) 2002, ದಿನಾಂಕ: 20.1.2002.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 57 ಮುನೋಸೇ (2) 2002, ದಿನಾಂಕ: 20.2.2004.
4. ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ (ಜಿ)/ಸಿಟಿ/ ಕ್ರೈಂ.35/02, ದಿನಾಂಕ:18.8.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:14.11.2002 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಅವರ ದಿನಾಂಕ:31.10.2002ರ ಪತ್ರದಲ್ಲಿ ಪಿರ್ಯಾದುದಾರರಾದ ಶ್ರೀ ಬಚ್ಚೇಗೌಡ, ಕೆಂಪಾಪುರ, ಹೆಬ್ಬಾಳ, ಬೆಂಗಳೂರು ನಗರ ಇವರು ದಿನಾಂಕ:21.10.2002 ರಂದು ನೀಡಿದ ದೂರಿನಡಿ ತಮ್ಮ ಪತ್ನಿ ಶ್ರೀಮತಿ ಮಂಜುಳಾ ಹೆಸರಿನಲ್ಲಿ ಕೆಂಪಾಪುರದ ಅಯ್ಯಪ್ಪಸ್ವಾಮಿ ದೇವಸ್ಥಾನದ ರಸ್ತೆಯಲ್ಲಿ ನಿವೇಶನ ಸಂಖ್ಯೆ 34ನ್ನು ನೋಂದಣಿ ಮಾಡಲು ಮೆ:ನಿದಾ ಎಂಟರ್‌ಪ್ರೈಸಸ್ ಮಾಲೀಕರಾದ ಶ್ರೀ ಎನ್.ಎ. ಷರೀಫ್ ಎಂಬುವವರು ಉಪ ನೋಂದಣಾಧಿಕಾರಿಗಳ ಪರವಾಗಿ ರೂ.2,500/- ಗಳನ್ನು ಲಂಚ ಕೇಳಿದ್ದಾಗಿ ದೂರು ನೀಡಿದ್ದರ ಆಧಾರದ ಮೇಲೆ ಲೋಕಾಯುಕ್ತ ಪೊಲೀಸರು ದಿನಾಂಕ:21.10.2002 ರಂದು ಶ್ರೀ ಎಸ್.ವಿ. ಷರೀಫ್, ಮಾಲೀಕರು, ನಿಡಾ ಎಂಟರ್‌ಪ್ರೈಸಸ್, ಶರಾವತಿ ಕಾಂಪ್ಲೆಕ್ಸ್, ಯಲಹಂಕ ಇವರ ಬಳಿಗೆ ಲಂಚದ ಹಣವಾದ ರೂ.2,500/- ಗಳನ್ನು ಪಿರ್ಯಾದುದಾರರು ಕೊಟ್ಟಿದ್ದು, ಲಂಚದ ಬಲೆಯನ್ನು ಬೀಸಲಾಗಿದೆ ಎಂದು ವರದಿ ಮಾಡುತ್ತಾ, ಶ್ರೀ ಜಿ. ಕೃಷ್ಣಮೂರ್ತಿ, ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ ಇವರು ಸುಗಮ ತನಿಖೆಗೆ ಅಡ್ಡಿ ಉಂಟು ಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆ ಇರುವುದರಿಂದ ಅವರನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಿರುವುದಾಗಿ ತಿಳಿಸಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ:20.1.2003ರ ಅಧಿಕೃತ ಜ್ಞಾಪನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಜಿ. ಕೃಷ್ಣಮೂರ್ತಿರವರನ್ನು ಯಲಹಂಕ ಉಪ ನೋಂದಣಿ ಕಛೇರಿಯಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಛೇರಿಗೆ ವರ್ಗಾಯಿಸಲಾಗಿದ್ದು, ನಂತರ

ಮೇಲೆ (3)ರಲ್ಲಿ ಓದಲಾದ ದಿನಾಂಕ:20.2.2004ರ ಸರ್ಕಾರದ ಅಧಿಸೂಚನೆಯಲ್ಲಿ ಇವರನ್ನು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ಕಾರವಾರ ಇಲ್ಲಿಗೆ ವರ್ಗಾಯಿಸಿ ನೇಮಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ:18.8.2003ರ ಪತ್ರದಲ್ಲಿ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತರವರು ಶ್ರೀ ಜಿ. ಕೃಷ್ಣಮೂರ್ತಿ, ಹಿರಿಯ ಉಪ ನೋಂದಣಾಧಿಕಾರಿಗಳು, ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ಕಾರವಾರ ಮತ್ತು ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ ಉಪ ನೋಂದಣಿ ಕಛೇರಿ, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ 7,13(1)(ಡಿ), ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ, ನ್ಯಾಯಾಲಯದಲ್ಲಿ ಕಾನೂನು ಕ್ರಮ ಜರುಗಿಸಲು ಸರ್ಕಾರದ ಮಂಜೂರಾತಿ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕ,ವಾಗಿ ಪರಿಶೀಲಿಸಲಾಯಿತು. ಸದರಿ ಅಧಿಕಾರಿಗಳು ಲಂಚಾರೋಪಕ್ಕೆ ಒಳಗಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಹಾಗೂ ಸದರಿಯವರ ವಿರುದ್ಧ ಗಂಭೀರವಾದ ಆಪಾದನೆ ಇರುವುದರಿಂದ ಆಪಾದಿತರನ್ನು ನ್ಯಾಯಾಲಯದಲ್ಲಿ ಪ್ರಾಸಿಕ್ಯೂಟ್ ಮಾಡಲು ಮಂಜೂರಾತಿ ನೀಡಬಹುದೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 49 ಮುನೋಸೇ (2) 2003, ಬೆಂಗಳೂರು,. ದಿನಾಂಕ: 2ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳಿಂದಾಗಿ, ಶ್ರೀ ಜಿ. ಕೃಷ್ಣಮೂರ್ತಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಯಲಹಂಕ, ಬೆಂಗಳೂರು ನಗರ ಜಿಲ್ಲೆ ಮತ್ತು ಹಾಲಿ ಅಧೀಕ್ಷಕರು, ಜಿಲ್ಲಾ ನೋಂದಣಾಧಿಕಾರಿ ಕಛೇರಿ, ಕಾರವಾರ, ಉತ್ತರಕನ್ನಡ ಜಿಲ್ಲೆ ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7 ಹಾಗೂ ಕಲಂ 13(1) (ಡಿ) ಹಾಗೂ ಕಲಂ 13(2) ರಂತೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸದರಿ ಕಾಯ್ದೆಯ ಕಲಂ 19ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 838

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## REVENUE SECRETARIAT

**Sub:** Issue of sanction order to the CBI to prosecute Sri M.Cheluvaiah, Retired Tahsildar, Somwarpet Taluk, Kodagu District under Section 197 of Code of Criminal Procedure, 1973- regarding.

**Read:**
1. Copy of letter of the Deputy Inspector General of Police, CBI.,HR, Hyderabad bearing No.DPDHY 2004 RCVIS 2003A 0003/1941, Dated:07-04-2004.
2. Letter No: GS 26 EST 2004, dated: 27-04-2004 from the Under Secretary to Governor, Raj Bhavan, Bangalore.

**Government Order No: RD 28 ADE 2004, Bangalore, Dated: 31st July 2004**

Whereas, it has been alleged that Sri M.Cheluvaiah, while being posted and working as Tahsildar of the Somwarpet Taluk, Kodagu District, Karnataka, during 1994, entered into a criminal conspiracy with Sri H.K.Sundar, working as Second Division Assistant, in the office of the Tahsildar, and with the residents of Somwarpet Taluk, i.e. S/Sri S.M.Mahesh, S.S.Devaraj, S.P.Kariyappa, S.T.Lingappa, S.P.Kutappa, who are private persons and with Sri N.D.Bopaiah, who is a public servant, to cheat the Kumbur Branch of the Chikmagalur Kodagu Grameena Bank. In furtherance of the said criminal conspiracy, Sri M.Cheluvaiah issued fake Coffee Registration Certificates to the said private persons, and Grant Certificate to Sri N.D.Bopaiah, who used the same for obtaining and attempting to obtain loans, from the Kumbur Branch of the Chikmagalur Kodagu Grameena Bank.

The above said allegations are based on the following facts and circumstances of the case.

That Sri M.Cheluvaiah, while being posted and working as Tahsildar, Somwarpet Taluk, Kodagu District, Karnataka during 1994, entered into a criminal conspiracy with Sri H.K.Sundar, working as Second Division Assistant in the office of the Tahsildar, and with the residents of Somwarpet Taluk, i.e. S/Sri S.M.Mahesh, S.S.Devaraj, S.P.Kariyappa, S.T.Lingappa, and S.P.Kutappa, who are private persons, and with Sri N.D.Bopaiah, who is a public servant, with a fraudulent and dishonest intention to cheat the Chikmagalur Kodagu Grameena Bank, Kumbur Branch, Somwarpet Taluk, Kodagu District, Karnataka by misusing his official position as a public servant.

That in pursuance of the said criminal conspiracy, Sri M.Cheluvaiah, while being posted and working as Tahsildar, Somwarpet Taluk, Kodagu District, Karnataka, during 1994, had colluded with Sri H.K.Sundar, working as Second Division Assistant in the office of the Tahsildar, and with S/Sri S.M.Mahesh, S.S.Devaraj, S.P.Kariyappa, S.T.Lingappa, S.P.Kutappa, who are private persons, for the issue of fake Coffee Registration Certificates. It is revealed that the Coffee Registration Certificate bearing No. 42/93-94 dated 22-04-1993 in the name of Sri S.M.Mahesh, Coffee Registration Certificate

bearing No.44/94-95 dated 29-03-1994 in the name of Sri S.S.Devaraj, Coffee Registration Certificate bearing No.47/94-95 dated 16-4-1994 in the name of Sri S.P.Kariyappa, Coffee Registration Certificates bearing Nos.5/93-94 dated 17-03-1994 and 6/93-94 dated 09-03-1994 in the name of S.T.Lingappa, and Coffee Registration Certificate bearing No.22/94-95 dated 27-04-1994 in the name of Sri S.P.Kutappa, were fabricated, and the same were issued under the signature of Sri M.Cheluvaiah, the then Tahsildar.

That all the Coffee Registration Certificates detailed above, were issued by Sri M.Cheluvaiah, in collusion with Sri H.K.Sundar, Second Division Assistant, in the office of the Tahsildar, and with the said private persons, and relate to non-existent Survey numbers of land/non coffee growing lands. That the same were not issued by the office of the Tahsildar, Somwarpet, and further that there were no entries regarding the issue of above mentioned CRCs, in the Original CRC Register maintained at the Tahsildar office, Somwarpet, since they were bogus and were issued by the accused Revenue officials for monetary considerations, by-passing all the established procedures for the issue of Coffee Registration Certificates. That Sri M.Cheluvaiah, had issued the said Coffee Registration Certificates under his signature, without causing any verification of the records and the claims of the parties, and without verifying the original Coffee Registration Certificate register.

That the said private persons S/Sri S.M.Mahesh, S.S.Devaraj, S.P.Kariyappa, S.T.Lingappa and S.P.Kutappa, who are persons, submitted the fake Coffee Registration Certificates fabricated by the said Revenue officials, along with the loan documents to the Kumbur Branch of the Chikmagalur Kodagu Grameena Bank during 1998-2001and obtained loans which are outstanding, against all the said borrowers at the branch, and the bank is bereft of security, by way of land, thereby causing substantial loss to the said Bank.

That the Grant Certificate No.23/93-94 dated 21-03-1994 for the grant of 19.66 acres in the name of Sri N.D.Bopaiah, is fake and fabricated, and is not issued by the Revenue authorities. That the original Grant Certificate No.23/93-94, is in the name of Sh.Abbas as per the Grant Register, maintained at the office of the Tahsildar, Somwarpet. It is also revealed that Sri M.Cheluvaiah with a fraudulent and dishonest intention, had fabricated and issued the said Grant Certificate under his signature, with the active connivance of Sri H.K.Sundar, Second Division Assistant in the office of the Tahsildar, and with the intended beneficiary, Sri N.D.Bopaiah, who did not get any grant of land from the Government.

That Sri N.D.Bopaiah who is a public servant, submitted the fake Grant Certificate, fabricated by Sri M.Cheluvaiah and Sri H.K.Sundar, alongwith the loan documents, to the Kumbur Branch of the Chikmagalur Kodagu Grameena Bank, during 2001, and attempted to obtain loans against the security of the bogus documents, thereby attempting to cheat and cause substancial losses to the said bank.

Whereas, the above said acts of Sri M.Cheluvaiah constitute commission of offences punishable u/s 120-B IPC r/w 420, 468, 471 and 511 IPC.

And Whereas, I Sri M.P.Prakash Minister for Revenue, Govt.of Karnataka, Vidhana Soudha, Bangalore, being authority competent, after fully and carefully examining the materials placed before, such as the copy of the FIR, copies of the statements of witnesses and material document etc. collected during the investigation in respect of the above allegations and circumstances of the case, and after having applied by mind on the said materials placed before me, consider that the said Sri M.Cheluvaiah, Retired Tahsildar be prosecuted in a court of law for the above said offences.

Now, therefore, I Sri M.P.Prakash, Minister for Revenue, Govt. of Karnataka, do hereby accord sanction U/s 197 of Code of Criminal Procedure, 1973, for the prosecution of the said Sri M.Cheluvaiah, for the above said offences committed by him in respect of the acts aforesaid, for taking cognizance of the said offences by the court of competent jurisdiction.

This order issues with the concurrence of the Law Department vide its U.O. Note No.LAW 361 OPN 2004, dated:08-06-2004.

By Order and in the name of the Governor of Karnataka,

**M.S. MAHANTHESAIAH**

P.R. 839

Under Secretary to Government,

Revenue Department (Services-3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000, ಬೆಂಗಳೂರು, ದಿನಾಂಕ: 27ನೇ ಜುಲೈ 2004**

**ವಿಷಯ:** ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ರವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000 ದಿನಾಂಕ: 1.7.2004 ರಲ್ಲಿನ ಆದೇಶದ ಭಾಗದ ಎರಡನೆ ಕಂಡಿಕೆಯಲ್ಲಿ "ಡೆಪ್ಯುಟಿ ಚೀಫ್ ಇಂಜಿನಿಯರ್ (ಆಡಳಿತ)" ಎಂಬುದಕ್ಕೆ ಬದಲಾಗಿ "ಕಾರ್ಯಪಾಲಕ ಇಂಜಿನಿಯರ್ (ವಿನ್ಯಾಸ)" ಎಂಬುದಾಗಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 841 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 350 ಎಸ್‌ಎಎಸ್ 2004 ದಿನಾಂಕ: 30.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ದಿನಾಂಕ: 30.6.2004ರ ಅಧಿಸೂಚನೆಯಲ್ಲಿ ಶ್ರೀ ಡಿ. ತಂಗರಾಜ್, ಐ.ಎ.ಎಸ್. ಇವರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಉನ್ನತೀಕರಿಸಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಿನಾಂಕ: 19.2.2004 ರಿಂದ ಚಾಲ್ತಿಯಲ್ಲಿರುವ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರು ಪದನಾಮೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 2004, ಬೆಂಗಳೂರು, ದಿನಾಂಕ: 21ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಡಿ. ತಂಗರಾಜ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕ: 2.7.2004 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರು ಪದನಾಮೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 842 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ^ಕಾರ್ಯಕಾರಿ–ಸಿ^ ಶಾಖೆಯನ್ನು ^ಆಡಳಿತ–ಇ^ ಶಾಖೆ ಎಂದು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಉಪ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ ಆಡಳಿತ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 48 ಸಿವಿವಿ 2004 ದಿನಾಂಕ: 15.6.2004.

**ಪ್ರಸ್ತಾವನೆ:**

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 15.6.2004ರ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ^ಕಾರ್ಯಕಾರಿ–ಸಿ^ ಶಾಖೆಯ ಉಪ ಕಾರ್ಯದರ್ಶಿ (ಆಡಳಿತ) ಇವರ ನಿಯಂತ್ರಣದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಈ ಶಾಖೆಯಲ್ಲಿ ಗ್ರೂಪ್ ^ಡಿ^ ನೌಕರರ ಹಾಗೂ ವಾಹನ ಚಾಲಕರ ಸೇವಾ ವಿಷಯಗಳನ್ನು ನಿರ್ವಹಿಸಲಾಗುತ್ತಿದೆ. ಈ ಕಾರಣದಿಂದಾಗಿ ^ಕಾರ್ಯಕಾರಿ–ಸಿ^ ಶಾಖೆಯ ಹೆಸರನ್ನು ^ಆಡಳಿತ–ಇ^ ಶಾಖೆ ಎಂದು ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ–2) ಹುದ್ದೆಯನ್ನು ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಆಡಳಿತ–3) ಹುದ್ದೆ ಎಂದು ಮಾರ್ಪಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 54 ಸಸಿವಿ 2004, ಬೆಂಗಳೂರು, ದಿನಾಂಕ: 20ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಉಪ ಕಾರ್ಯದರ್ಶಿ (ಆಡಳಿತ) ಇವರ ನಿಯಂತ್ರಣದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಕಾರ್ಯಕಾರಿ–2) ಹುದ್ದೆಯ ಪದನಾಮವನ್ನು ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಆಡಳಿತ–3) ಎಂದು ಹಾಗೂ ಕಾರ್ಯಕಾರಿ–ಸಿ ಶಾಖೆಯನ್ನು ಆಡಳಿತ–ಇ ಶಾಖೆ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಮಾರ್ಪಡಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 843 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 475 ಸೇಅಸೆ 2001 ದಿನಾಂಕ: 6.9.2001.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 475 ಸೇಅಸೆ 2001 ದಿನಾಂಕ: 19.7.2002.
3. ತಿದ್ದೋಲೆ ಸಂಖ್ಯೆ: ಸಿಆಸುಇ 475 ಸೇಅಸೆ 2001 ದಿನಾಂಕ: 1.8.2002.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 475 ಸೇಅಸೆ 2001 ದಿನಾಂಕ: 1.8.2003.
5. ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಸಿಎಂಡಬ್ಲ್ಯೂ/ಪಿಎಸ್/1080/2004, ದಿನಾಂಕ: 15.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 6.9.2001ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಹಕಾರ ಇಲಾಖೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಐ.ಎ.ಎಸ್.ನ ಎಬೌ ಸೂಪರ್ ಟೈಂ ಸ್ಕೇಲ್ (ರೂ.22,400–24,500) ರಲ್ಲಿ ದಿನಾಂಕ: 2.8.2000 ದಿಂದ ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು. ನಂತರ ಈ ಹುದ್ದೆಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (4) ರಲ್ಲಿರುವ ದಿನಾಂಕ: 1.8.2003ರ ಸರ್ಕಾರದ ಆದೇಶದನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 1.8.2004ಕ್ಕೆ ಮುಕ್ತಾಯಗೊಳ್ಳಲಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 15.6.2004ರ ಟಿಪ್ಪಣಿಯಲ್ಲಿ ಈ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2004, ಬೆಂಗಳೂರು, ದಿನಾಂಕ: 15ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಹಕಾರ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 2.8.2004 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಆಶೀಸೆ 2003, ದಿನಾಂಕ: 14.7.2003 ರಲ್ಲಿ ನಿಗದಿಪಡಿಸಿರುವಂತೆ ಇವರ ಆಪ್ತ ಶಾಖೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ನಿಗದಿ ಪಡಿಸಿ ಮುಂದುವರೆಸಲು ಸಹ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 844

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಶಿಸನೇ 2004, ಬೆಂಗಳೂರು, ದಿನಾಂಕ: 28ನೇ ಜುಲೈ 2004**

**ವಿಷಯ:** ನಿರ್ಗಮಿಸುವ ಮುಖ್ಯ ಮಂತ್ರಿಗಳ ಸಿಬ್ಬಂದಿ ವರ್ಗಕ್ಕೆ ಒಂದು ವಾಹನ ಚಾಲಕ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 67 ಶಿಸನೇ 2004ದ ದಿನಾಂಕ: 8.6.2004.
2. ಮಾಜಿ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣರವರ ಟಿಪ್ಪಣಿ ಸಂಖ್ಯೆ:ಎಸ್‌ಎಂಕೆ:12:04: ದಿನಾಂಕ:19.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 67 ಶಿಸನೇ 2004 ದಿನಾಂಕ: 8.6.2004 ರಲ್ಲಿ ತಕ್ಷಣವೇ ಪದವಿಯನ್ನು ತ್ಯಜಿಸಿದ ಮುಖ್ಯಮಂತ್ರಿಗಳಿಗೆ ನೂತನವಾಗಿ ಪದಾರೋಪಣ ಮಾಡಿದ ಮುಖ್ಯ ಮಂತ್ರಿಗಳ ಪದವಿಯ ಅವಧಿ ಇರುವವರೆಗೆ ಅಥವಾ ಮೂರು ವರ್ಷಗಳ ಅವಧಿಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವೇತನ ಶ್ರೇಣಿ ರಹಿತ ಗ್ರೂಪ್ 'ಸಿ' ವೃಂದದ ಆಪ್ತ ಸಹಾಯಕರು-2 ಹುದ್ದೆ ಹಾಗೂ 4ನೇ ದರ್ಜೆಯ ('ಡಿ' ವೃಂದ) ನೌಕರರ 2 ಹುದ್ದೆ ಮತ್ತು ಅಂಗರಕ್ಷಕರು (ಗನ್‌ಮ್ಯಾನ್) 3 ಹುದ್ದೆಗಳನ್ನು ಸೃಜಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಮೇಲೆ ಸರ್ಕಾರದ ಕ್ರಮ ಸಂಖ್ಯೆ (2)ರ ಟಿಪ್ಪಣಿಯಲ್ಲಿ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣರವರು ಒಂದು ವಾಹನ ಚಾಲಕರ ಹುದ್ದೆಯನ್ನು ಸಹ ಸೃಜಿಸಿ ಈ ಹುದ್ದೆಗೆ ಶ್ರೀ ಎಲ್. ಕೃಷ್ಣಮೂರ್ತಿ, ವಾಹನ ಚಾಲಕ, ಕರ್ನಾಟಕ ವಿಧಾನ ಸಭೆ ಸಚಿವಾಲಯರವರನ್ನು ನೇಮಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಮಾಜಿ ಮುಖ್ಯ ಮಂತ್ರಿಯವರಿಗೆ ಒಂದು ವಾಹನ ಚಾಲಕರನ್ನು ನೀಡುವುದು ಸೂಕ್ತವೆಂದು ಪರಿಗಣಿಸಿ ಒಂದು ವಾಹನ ಚಾಲಕರ ಹುದ್ದೆಯನ್ನು ಸೃಜಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**"ಆದೇಶ"**

ಸೂಕ್ತ ಪರಿಶೀಲನೆಯ ತರುವಾಯ ದಿನಾಂಕ: 8.6.2004ರ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 67 ಶಿಸನೇ 2004ನ್ನು ಭಾಗಶಃ ಮಾರ್ಪಡಿಸುತ್ತಾ, ಮಾಜಿ ಮುಖ್ಯ ಮಂತ್ರಿಗಳ ಕಛೇರಿಗೆ ಒಂದು ವಾಹನ ಚಾಲಕರ ಹುದ್ದೆಯನ್ನು (ವೇತನ ಶ್ರೇಣಿ ರಹಿತ) ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ದಿನಾಂಕ: 8.6.2004ರ ಸರ್ಕಾರದ ಆದೇಶದಲ್ಲಿನ ಇತರೆ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1192 ವೆಚ್ಚ-5:2004, ದಿನಾಂಕ: 19.7.2004ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ.ಜೆ.ಎ. ಆಶೀರ್ವಾದಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ರಾಜ್ಯ ಶಿಷ್ಟಾಚಾರ)

ಪಿ.ಆರ್. 845

**HEALTH AND FAMILY WELFARE SECRETARIAT**

**CORRIGENDUM**

**No. HFW 483 PTD 2004, Bangalore, Dated: 30th July 2004**

In Government Order No. HFW 55 PTD 2002, Dated 9.8.2002 for the members in Sl. No. (3) and (4) the following shall be substituted.

(3) Principal/ Chairman of Board of Examining Authority.
Government College of Pharmacy
Bangalore - 560 027.

(4) Member Secretary
Board of Examining Authority
Government College of Pharmacy
Bangalore - 560 027

By Order and in the name of the Governor of Karnataka,
**CHOMANAYAK .G**
Under Secretary to Government,
Health & Family Welfare Department

P.R. 846

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

ಅಧಿಸೂಚನೆ

ಸಂಖ್ಯೆಃ ಆಕುಕ 278 ಎಂಎಸ್ಎಸ್ 2004, ಬೆಂಗಳೂರು, ದಿನಾಂಕಃ 4ನೇ ಆಗಸ್ಟ್ 2004

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸಹ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಟತಾ ಪಟ್ಟಿಯನ್ನು ದಿನಾಂಕ:1.1.2004 ರಲ್ಲಿದ್ದಂತೆ ತಯಾರಿಸಲು ಸರ್ಕಾರ ತೀರ್ಮಾನಿಸಿದೆ. ಕರ್ನಾಟಕ ಸರ್ಕಾರಿ ನೌಕರರ (ಜೇಷ್ಟತಾ ನಿಯಮಾವಳಿ) 1957ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ತಾತ್ಕಾಲಿಕ ಜೇಷ್ಟತಾ ಪಟ್ಟಿಯನ್ನು ದಿನಾಂಕ: 24.3.2004 ರಂದು ಪ್ರಕಟಿಸಲಾಗಿತ್ತು.

ಈ ತಾತ್ಕಾಲಿಕ ಜೇಷ್ಟತಾ ಪಟ್ಟಿಯ ಮೇಲೆ ಅಭಾದಿತರಾದ ವೈದ್ಯಾಧಿಕಾರಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಟತಾ ಪಟ್ಟಿಗೆ ಸಂಬಂಧಿಸಿದಂತೆ ಅಧಿಕಾರಿಗಳಿಂದ ನಿರ್ದಿಷ್ಟ ಕಾರಣಗಳು ಒಳಗೊಂಡ ಯಾವುದೇ ಆಕ್ಷೇಪಣೆಗಳು ಬಾರದೇ ಇರುವುದನ್ನು ಪರಿಶೀಲಿಸಿ, ದಿನಾಂಕ:24.3.2004ರ ಸರ್ಕಾರಿ ಅಧಿಸೂಚನೆಯಲ್ಲಿ ಪ್ರಕಟಗೊಂಡಿರುವ ದಿನಾಂಕ:1.1.2004 ರಲ್ಲಿದ್ದಂತೆ ಸಹ ನಿರ್ದೇಶಕರ ವೃಂದದ ಅಂತಿಮ ಜೇಷ್ಟತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪರಿಗಣಿಸಿ ಸಂಬಂಧಪಟ್ಟ ಎಲ್ಲರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಶೀನಾಥ ಪಟವಾಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಅನುಬಂಧ ದಿನಾಂಕಃ 1.1.2004 ರಲ್ಲಿದ್ದಂತೆ ಸಹ ನಿರ್ದೇಶಕರ ವೃಂದದ ಅಂತಿಮ ಜೇಷ್ಟತಾ ಪಟ್ಟಿ

| ಕ್ರ. ಸಂ | ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಪಡೆದ ದಿನಾಂಕ | ನೇಮಕಾತಿ ಜೇಷ್ಟತೆಗೆ ನೈಜವಾದ ಅರ್ಹತೆ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಡಾಃಎಸ್.ಎಸ್ ಮಲ್ಕೇಡಕರ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 23.06.46 | 13.11.70 | 26.09.2002 | 26.09.2002 |
| 2 | ಡಾಃವಿ.ಕೃಷ್ಣಯ್ಯ ಚೌಧರಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 20.03.46 | 10.12.70 | 26.09.2002 | 26.09.2002 |
| 3 | ಡಾಃಜಿ.ಕಾಶೀ ರೆಡ್ಡಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 01.07.46 | 15.10.70 | 26.09.2002 | 26.09.2002 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 4 | ಡಾ॥ಕೊಟಿಲ್ಡಾ ರೀಟಾ ಲೋಬೋ | ಮುಂಬಡ್ತಿ | ಅನ್ವಯಿಸುವುದಿಲ್ಲ | 14.04.46 | 04.09.71 | 26.09.2002 | 26.09.2002 |
| 5 | ಡಾ॥ಎಸ್. ಪ್ರಮೀಳ | ಮುಂಬಡ್ತಿ | ಅನ್ವಯಿಸುವುದಿಲ್ಲ | 28.05.46 | 04.05.71 | 26.09.2002 | 26.09.2002 |
| 6 | ಡಾ॥ ಬಿ.ವಿದ್ಯಾಮಣಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 31.01.47 | 04.03.71 | 19.07.2003 | 19.07.2003 |
| 7 | ಡಾ॥ ಪಾರ್ವತಿ ವಿ.ನಾಗರಾಳ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 01.08.47 | 04.06.71 | 19.07.2003 | 19.07.2003 |
| 8 | ಡಾ॥ ಗೌರಮ್ಮ | ಮುಂಬಡ್ತಿ | ಅನ್ವಯಿಸುವುದಿಲ್ಲ | 22.02.46 | 04.07.71 | 19.07.2003 | 19.07.2003 |
| 9 | ಡಾ॥ ಚಂದ್ರ ಆರ್.ನಾಯಕ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 25.09.46 | 22.09.71 | 19.07.2003 | 19.07.2003 |
| 10 | ಡಾ॥ ಕರ್ಪೂರ ಮಲ್ಲಪ್ಪ | ಮುಂಬಡ್ತಿ | ಅನ್ವಯಿಸುವುದಿಲ್ಲ | 22.11.46 | 24.07.71 | 22.10.2003 | 22.10.2003 |
| 11 | ಡಾ॥ ಟಿ.ಪಾರ್ಥ ಸಾರಥಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 18.03.46 | 20.09.71 | 22.10.2003 | 22.10.2003 |

**ಕಾಶೀನಾಥ ಪಟವಾಡಿ**

ಪಿ.ಆರ್. 847 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಚಾಮೇಗೌಡ, ಕ್ಷೇತ್ರ ಶಿಕ್ಷಣಾಧಿಕಾರಿ ಇವರಿಗೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಮಂಜೂರಾತಿ ಕುರಿತು.

**ಪೀಠಿಕೆ:**

ಶ್ರೀ ಚಾಮೇಗೌಡ ಇವರು ದಿನಾಂಕ:26.10.84 ರಂದು ಗ್ರೂಪ್ ಬಿ ವೃಂದದ ಮುಖ್ಯ ಶಿಕ್ಷಕರ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಸದರಿಯವರು 10 ವರ್ಷಗಳ ನಿರಂತರ ಸೇವೆಯನ್ನು ಗ್ರೂಪ್ ಬಿ ವೃಂದದ ಹುದ್ದೆಯಲ್ಲಿ ದಿನಾಂಕ:26.10.84 ರಿಂದ 26.10.94ರವರೆಗೆ ಸಲ್ಲಿಸಿದ್ದುದರಿಂದ ದಿನಾಂಕ:26.10.1994ರಿಂದ ಕಾಲಮಿತಿ ವೇತನ ಬಡ್ತಿಗೆ ಅರ್ಹರಾಗಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 295 ಡಿಪಿಐ 2001, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2004**

ಶ್ರೀ ಚಾಮೇಗೌಡ ಅವರು ಗ್ರೂಪ್ ಬಿ ದರ್ಜೆಯ ಹುದ್ದೆಯಲ್ಲಿ ದಿನಾಂಕ:26.10.84ರಿಂದ 26.10.1994 ರವರೆಗೆ ಮುಖ್ಯ ಶಿಕ್ಷಕರ ವೃಂದದಲ್ಲಿ 10 ವರ್ಷಗಳ ಸತತ ಸೇವೆಯನ್ನು ಯಾವುದೇ ಪದೋನ್ನತಿಯನ್ನು ಹೊಂದದೆ ಸಲ್ಲಿಸಿರುವ ಕಾರಣದಿಂದಾಗಿ ದಿನಾಂಕ:8.6.1983ರ ಅಧಿಸೂಚನೆ ಸಂಖ್ಯೆ.ಎಫ್.ಡಿ. 105 SRP(CSC)82 ರ ಪ್ರಕಾರ ವೇತನ ಶ್ರೇಣಿ 2050-3950 ರಿಂದ 2150-4200ರ ವೇತನ ಶ್ರೇಣಿಯಲ್ಲಿ ದಿನಾಂಕ:26.10.1994ರಿಂದ ವೇತನ ನಿಗದಿಗೊಳಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಶ್ರೀ ಚಾಮೇಗೌಡ ಅವರ 15 ವರ್ಷಗಳ ಸೇವಾ ಅವಧಿಯು ದಿನಾಂಕ:25.10.1999ಕ್ಕೆ ಮುಕ್ತಾಯಗೊಂಡಿದ್ದು, ಆ ಅವಧಿಗೆ ಮುಂಚೆ ಅಂದರೆ ದಿನಾಂಕ:21.6.1999ರ ಸರ್ಕಾರದ ಅಧಿಸೂಚನೆ ಸಂಖ್ಯೆ.ಇಡಿ 31 ಡಿಪಿಐ 98ರಲ್ಲಿ ಶಿಕ್ಷಣಾಧಿಕಾರಿ ವೃಂದದ ಹುದ್ದೆಗೆ ಬಡ್ತಿ ಹೊಂದಿರುವುದರಿಂದ ಸ್ವಯಂಚಾಲಿತ ವೇತನ ಬಡ್ತಿಗೆ ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 848 ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1,2)

**ವಿಷಯ:** ಶ್ರೀ ಎಸ್.ವಿ.ಕುಲಕರ್ಣಿ, ಹಿರಿಯ ಉಪನ್ಯಾಸಕರು,(ಸ್ವತಂತ್ರ ಪ್ರಭಾರ) ಶಿಕ್ಷಣಾಧಿಕಾರಿ ವೃಂದ ಇವರು ಅರ್ಜಿ ಸಂಖ್ಯೆ.3637/2000ರ ಮೇಲೆ ನ್ಯಾಯಾಲಯವು ದಿನಾಂಕ:4.7.2003ರಂದು ನೀಡಿರುವ ತೀರ್ಪನ್ನು ಕಾರ್ಯಗತಗೊಳಿಸುವ ಬಗ್ಗೆ

**ಪ್ರಸ್ತಾವನೆ:**

ಶ್ರೀ ಎಸ್.ವಿ.ಕುಲಕರ್ಣಿ ಇವರು ಕೆ.ಎ.ಟಿ.ಯಲ್ಲಿ ಸಲ್ಲಿಸಿದ ಅರ್ಜಿ ಸಂಖ್ಯೆ.3637/2003ರ ಮೇಲೆ ದಿನಾಂಕ:4.7.2003ರಂದು ನೀಡಲಾಗಿರುವ ತೀರ್ಪಿನಲ್ಲಿ ನ್ಯಾಯಾಲಯವು ಈ ಕೆಳಕಂಡಂತೆ ಆದೇಶಿಸಿದೆ:

The grievance of the applicant is that Sri K.Annayya Hoblidar, Sri Syed Sanaulla and Sri E.Nanjappa who are juniors to him in the cadre are promoted as Deputy Directors on 10.4.2003 ignoring his claim. Annexure.A5 is the Order by which those three persons are promoted. Annexure.A.I is the copy of the Notification dated 14.9.1981 by which the officers appointed are declared to have completed the period of probation satisfactorily, we find the applicants name at serial No.52 whereas the others three at 53,55 and 57. It is in these circumstances the applicant has sought for considering his case for promotion from the date on which the other three are promoted. Annexure-A6 is the copy of the representation by the applicant dated 27.3.2003 addressed to the first respondent- the Secretary.

In these circumstances and having regard to the relief sought for, it would be appropriate to dispose of this application directing Respondents 1 and 2 to consider the case of the applicant for promotion in the light of the order at Annexure-A5 and take decision in the matter at the earliest in accordance with law.

**ಸರ್ಕಾರದ ಆದೇಶ ಸಂಖ್ಯೆ.ಇ ಡಿ 743 ಡಿಪಿಐ 2003, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2004**

1. ಶ್ರೀ, ಎಸ್.ವಿ.ಕುಲಕರ್ಣಿ ಇ ವರು, ಕೆ.ಸಿ.ಎಸ್.ಆರ್.ನಿಯಮ 32ರಡಿ ಸ್ವತಂತ್ರ ಪ್ರಭಾರದಲ್ಲಿ ಗ್ರೂಪ್-ಎ ಕಿರಿಯಶ್ರೇಣಿಯ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಹುದ್ದೆಯಾದ ಹಿರಿಯ ಉಪನ್ಯಾಸಕರ ಹುದ್ದೆಯಲ್ಲಿ ಡಯಟ್ ಧಾರವಾಡ ಇ ಲ್ಲಿ ದಿನಾಂಕ:20.12.95ರ ಆದೇಶ ಸಂಖ್ಯೆ.ಇ ಡಿ 410 ಡಿಪಿಐ 93ರ ಪ್ರಕಾರ ಕಾರ್ಯನಿರ್ವಹಿಸುತ್ತಿದ್ದಾರೆ. ಮುಖ್ಯೋಪಾಧ್ಯಾಯರ ವೃಂದದಲ್ಲಿ ಸದರಿಯವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಅಣ್ಣಯ್ಯ ಹೋಬಳಿದಾರ ಇ ವರನ್ನು ಗ್ರೂಪ್-ಎ ಕಿರಿಯಶ್ರೇಣಿ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಹುದ್ದೆಗೆ ಇ ಡಿ744 ಡಿಪಿಐ 91(ಭಾಗ-1), ದಿನಾಂಕ:30.9.93ರ ಆದೇಶದ ಪ್ರಕಾರ ಸ್ಥಾನಪನ್ನ ಪದೋನ್ನತಿ ನೀಡುವಾಗ್ಗೆ ಶ್ರೀ ಕುಲಕರ್ಣಿ ಅವರ ವಿರುದ್ಧ ಈ ಕೆಳಕಂಡ ಆರೋಪಗಳನ್ನೊಳಗೊಂಡ ಶಿಸ್ತುಕ್ರಮ ಬಾಕಿಯಿದ್ದ ಪ್ರಯುಕ್ತ ಅವರ ಸ್ಥಾನಪನ್ನ ಪದೋನ್ನತಿಯನ್ನು ಮುಚ್ಚಿದ ಲಕೋಟೆಯಲ್ಲಿರಿಸಿದೆ.

1.ಅಧಿಕಾರ ದುರುಪಯೋಗ, ಸಾರ್ವಜನಿಕರೊಡನೆ ಅಸಭ್ಯ ವರ್ತನೆ

2.ಪೋಲೀಸ್ ಕೇಸ್ ಇ ದ್ದು, ಪೋಲೀಸರಿಂದ ವರದಿ ಬರಬೇಕಿದೆ

3. ಆಡಳಿತಾತ್ಮ ಕ ಹಾಗೂ ಹಿರಿಯ ಅಧಿಕಾರಿಗಳ ಆದೇಶ ಪಾಲಿಸದಿರುವುದು

2. ಮೇಲೆ ಹೇಳಿದ ಶಿಸ್ತು ಪ್ರಕರಣದಲ್ಲಿ ದಿನಾಂಕ:23.11.1998ರ ಸರ್ಕಾರದ ಆದೇಶ ಸಂಖ್ಯೆ.ಇ ಡಿ 141 ಡಿಜಿಡಿ 97ರಲ್ಲಿ ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮ 1957ರ ನಿಯಮ 8(iii)ರ ಪ್ರಕಾರ ಎರಡು ವಾರ್ಷಿಕ ಬಡ್ತಿಗಳನ್ನು ತಡೆಹಿಡಿಯುವ ದಂಡನೆ ವಿಧಿಸಲಾಗಿದೆ. ಈ ಆದೇಶದ ವಿರುದ್ಧ ಅವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮುಂದೆ ಅರ್ಜಿ ಸಂಖ್ಯೆ.1758/99ನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ:1.4.2003ರಂದು ತೀರ್ಪು ನೀಡಿದೆ. ಸದರಿ ತೀರ್ಪಿನಲ್ಲಿ ಆಪಾದಿತರು ಮಾಡಿರುವ ಕೃತ್ಯಗಳು ಯಾವುದೇ ದುರುದ್ದೇಶದಿಂದ ಮಾಡಿದ ಕೃತ್ಯಗಳು ಆಗದೇ ಇ ರುವುದರಿಂದ, ಅವುಗಳು ಸಿಸಿಎ ನಿಯಮಗಳ ಅಡಿ ದುರ್ನಡತೆ ಆಗುವುದಿಲ್ಲವೆಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ದಿನಾಂಕ:9.2.2004ರ ಸರ್ಕಾರದ ಆದೇಶ ಸಂಖ್ಯೆ.ಇ ಡಿ 8 ಡಿಜಿಡಿ 98ರಲ್ಲಿ ವಿಧಿಸಲಾದ ದಂಡನೆಯನ್ನು ರದ್ದುಗೊಳಿಸಿ ಆದೇಶಿಸಿದೆ.

3. ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ.465/2004ರಲ್ಲಿ ಅರ್ಜಿದಾರರಿಗೆ ದಿನಾಂಕ:10.4.2003ರಂದು ಅವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾದ ಉಪನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿದ ದಿನಾಂಕದಿಂದ ಬಡ್ತಿ ನೀಡಲು ಪರಿಗಣಿಸುವಂತೆ ಕೋರಲಾಗಿದೆ. ಮೇಲೆ ವಿವರಿಸಿರುವಂತೆ ಶ್ರೀ ಎಸ್.ವಿ.ಕುಲಕರ್ಣಿ ಇ ವರು ಇ ನ್ನೂ ಗ್ರೂಪ್-ಬಿ ಹುದ್ದೆಯ ವೃಂದದವರಾಗಿದ್ದು, ಶಿಕ್ಷಣಾಧಿಕಾರಿ ವೃಂದದ ಹುದ್ದೆಯಲ್ಲಿ ನಿಯಮ 32ರಡಿ ಪ್ರಭಾರದಲ್ಲಿರುವುದರಿಂದ ಉಪನಿರ್ದೇಶಕರ ಹುದ್ದೆಗೆ ಪದೋನ್ನತಿಗೆ ಪರಿಗಣಿಸಲು ಬರುವುದಿಲ್ಲ.

4. ಈ ಮಧ್ಯದ ಅವಧಿಯಲ್ಲಿ ಧಾರವಾಡ ಲೋಕಾಯುಕ್ತ ಪೋಲೀಸ್ ಠಾಣೆಯ ಗುನ್ನೆ ಸಂಖ್ಯೆ.10/97ರಲ್ಲಿ ಆರೋಪಿಯಾದ, ಶ್ರೀ ಎಸ್.ವಿ.ಕುಲಕರ್ಣಿ ಇ ವರು ಶಿರಹಟ್ಟಿ ತಾ: ಬಿಇ ಓ ಆಗಿದ್ದಾಗ ದಿನಾಂಕ:16.4.1997ರಂದು ಲಂಚ ಸ್ವೀಕರಿಸುತ್ತಿದ್ದಾಗ ಟ್ರಾಪ್ ಆಗಿದ್ದು, ತತ್ಸಂಬಂಧ ದಿನಾಂಕ:24.5.97ರ ಸರ್ಕಾರಿ ಆದೇಶದ ಪ್ರಕಾರ ಅಮಾನತ್ತಾಗಿದ್ದು, ಇ ವರ ಮೇಲಿನ ಟ್ರಾಪ್ ಪ್ರಕರಣದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವು ವಿಶೇಷ ಸಂಖ್ಯೆ.9/2000ರಲ್ಲಿ ವಿಚಾರಣೆ ನಡೆಸಿ ದಿನಾಂಕ:30.4.2004ರಂದು ಆರೋಪಿಗೆ ಲಂಚ ನಿರೋಧ ಕಾಯಿದೆ ಕಲಂ 7ರ ಕೆಳಗೆ ಅಪರಾಧ ಮಾಡಿದ ಬಗ್ಗೆ 6 ತಿಂಗಳ ಸಾದಾ ಶಿಕ್ಷೆ ಮತ್ತು ರೂ.3000ಗಳ ದಂಡ ಮತ್ತು ಸದರಿ ಕಾಯ್ದೆ ಕಲಂ 13(2)ರ ಕೆಳಗೆ ಅಪರಾಧ ಮಾಡಿದ ಬಗ್ಗೆ 1 ವರ್ಷ ಸಾದಾ ಶಿಕ್ಷೆ ಮತ್ತು 5 ಸಾವಿರ ರೂ.ಗಳ ದಂಡ ವಿಧಿಸಿ ಆದೇಶ ನೀಡಿದೆ. ಈ ಹಿನ್ನೆಲೆಯಲ್ಲಿ ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇ ವರು ದಿನಾಂಕ:14.7.2004ರಂದು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇ ಲಾಖೆ ಇ ವರಿಗೆ ಬರೆದ ಪತ್ರದಲ್ಲಿ ಇ ವರನ್ನು ಸೇವೆಯಿಂದ ವಜಾ ಮಾಡಲು ಕ್ರಮ ಕೈಗೊಳ್ಳುವಂತೆ ಕೋರಲಾಗಿದೆ.

5. ಮೇಲೆ ವಿವರಿಸಲಾಗಿರುವ ಕಾರಣಗಳಿಂದ ಕೆಸಿಎಸ್ ಆರ್ ನಿಯಮ 32ರಡಿ ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ವಿ.ಕುಲಕರ್ಣಿ ಇ ವರಿಗೆ ಶಿಕ್ಷಣಾಧಿಕಾರಿ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ಅಥವಾ ಉಪನಿರ್ದೇಶಕರ ಹುದ್ದೆಗೆ ಪದೋನ್ನತಿ ನೀಡಲು ಅವಕಾಶವಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 849

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1,2)

**FOREST, ECOLOGY AND ENVIRONMENT SECRETARIAT**

**Sub:** Mining lease application of M/s Kumaraswamy Minerals Exports Bellary for iron ore over an area of 30.80 ha. of forest land in R.M.Block of Yashwanthanagar Village, Bellary District- Exten. of lease period from 10 to 20 years.

**Read:**
1. Government Order No. FEE 44 FFM 87, dt: 3.12.1994.
2. Letter dt:26.11.2001 and 14.8.2003 of the M/s Kumara Swamy Mineral Exports, Bellary.

3. Government letter No. FEE 83 FFM 98, Dated: 5.12.2001 No.FEE 125 FFM 2003, dated: 15.11.2003.
4. Government of India, Ministry of Environment and Forests, New Delhi Letter No. 8-286/88-FC dated: 12.5.2004.

**PREAMBLE:**

In the Government Order read at (1) above Government accorded approval for grant of mining lease over an area of 30.80 ha. of forest land in R.M. Block Yashwanthanagar Village, Bellary District for iron ore mining for a period of 10 years in favour of M/s Kumarswamy Minerals Exports, Bellary.

The user agency M/s Kumaraswamy Minerals Exports, Bellary requested the Government in the letter read at (2) above to extend the lease period from 10 years to 20 years as Mines and Geology Department has sanctioned the mining lease for a period of 20 years and the lease deed has also been executed for a period of 20 years.

The proposal was recommended to the Government of India, Ministry of Environment and Forests, New Delhi vide letter dated 5.12.2001 and 15.11.2003 read at (3) above.

Government of India, Ministry of Environment and Forests, New Delhi vide their letter dated 12.5.2004 read at (4) above has conveyed its approval for extension of lease period from 10 to 20 years over 30.80 ha. of forest land.

**Government Order No. FEE 125 FFM 2003,Bangalore, Dated: 6th August 2004**

After examining the matter and in view of the approval accorded to the proposal by the Government of India, approval is accorded for extension of lease period from 10(ten) to 20(twenty) years over an area of 30.80 ha. of forest land to make the lease period end with the mining lease granted under MMRD Act,1957 in accordance with para 4(16)(i) of the guide lines issued under Forest (Conservation) Act,1980 subject to strict compliance of the conditions already stipulated in the Government Order dated 3.12.1994.

By Order and in the name of the Governor of Karnataka,
**S.R. VATSALA**
Under Secretary to Government,
Forest, Ecology and Environment Department.

P.R. 850

**ಕಂದಾಯ ಸಚಿವಾಲಯ**

**ಸುತ್ತೋಲೆ ಸಂ.ಆರ್‌ಡಿ 701 ಟಿ.ಆರ್.ಎಂ. 2003, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2004**

**ವಿಷಯ:** ಕರ್ನಾಟಕ ಭೂ ಕಂದಾಯ ನಿಯಮಾವಳಿ, 1966ರ ನಿಯಮ 147(ಸಿ)ರ ಅಡಿಯಲ್ಲಿ ಭೂ ಕಂದಾಯವನ್ನು ಮನ್ನಾ ಮಾಡುವ ಬಗ್ಗೆ.

ಕರ್ನಾಟಕ ಭೂ ಕಂದಾಯ ನಿಯಮಾವಳಿ, 1966ರ ನಿಯಮ 147(ಸಿ)ರ ಅಡಿಯಲ್ಲಿ ಸರಾಸರಿ ಬೆಳೆ ಇಳುವರಿಯ ಪ್ರಮಾಣ ಕುರಿತಂತೆ ಜಿಲ್ಲಾಧಿಕಾರಿಗಳ ಪ್ರಸ್ತಾವನೆ : ಶಿಫಾರಸ್ಸನ್ನು ಆಧರಿಸಿ ಭೂ ಕಂದಾಯವನ್ನು ಈ ಕೆಳಕಂಡಂತೆ ಮನ್ನಾ ಮಾಡಲು ಅವಕಾಶವನ್ನು ಕಲ್ಪಿಸಲಾಗಿದೆ.

(1) ಸರಾಸರಿ ಬೆಳೆ ಇಳುವರಿ ಶೇಕಡಾ 25ಕ್ಕಿಂತ ಕಡಿಮೆ ಇದ್ದಲ್ಲಿ ಶೇಕಡಾ 100 ರಷ್ಟು ಭೂ ಕಂದಾಯ ಮನ್ನಾ.

(2) ಸರಾಸರಿ ಬೆಳೆಯ ಇಳುವರಿಯ ಪ್ರಮಾಣವು ಶೇಕಡಾ 25ಕ್ಕಿಂತ ಹೆಚ್ಚು ಆದರೆ, ಶೇಕಡಾ 50ಕ್ಕಿಂತ ಕಡಿಮೆ ಇದ್ದಲ್ಲಿ ಶೇಕಡಾ 50 ರಷ್ಟು ಭೂ ಕಂದಾಯ ಮನ್ನಾ.

ಜಿಲ್ಲಾಧಿಕಾರಿಗಳು, ತಮ್ಮ ಆಡಳಿತಾತ್ಮಕ ಕಾರ್ಯ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕುಗಳಿಂದ ಗ್ರಾಮವಾರು ಜಮೀನುಗಳ ಸರಾಸರಿ ಬೆಳೆಯ ಇಳುವರಿಯ ಪ್ರಮಾಣದ ಸಮೀಕ್ಷೆಯನ್ನು ಕಂದಾಯ ಇಲಾಖೆ ಹಾಗೂ ಕೃಷಿ ಇಲಾಖೆಯ ನೌಕರರುಗಳ ಸಹಯೋಗದೊಂದಿಗೆ ನಡೆಸಿ, ಗ್ರಾಮದ ಸರಾಸರಿ ಇಳುವರಿಯನ್ನು ಆಣೇವಾರಿ ವಿವರಗಳೊಂದಿಗೆ ಭೂ ಕಂದಾಯವನ್ನು ಮನ್ನಾ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗುತ್ತಿದೆ.

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಕೃಷಿ ಇಲಾಖೆಯ ಸಹಯೋಗದೊಂದಿಗೆ ರಾಜ್ಯಾದ್ಯಂತ ಪ್ರಾಯೋಗಿಕ ಬೆಳೆ ಕಟಾವು ಪ್ರಯೋಗಗಳನ್ನು ನಡೆಸಲಾದ ವಿವರಗಳನ್ನು ಪರಿಶೀಲನೆಗಾಗಿ ಸರ್ಕಾರಕ್ಕೆ ಕಳುಹಿಸಿಕೊಡಲಾಗುತ್ತಿದೆ.

ದಿನಾಂಕ: 13.5.2004 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ರಾಜ್ಯದ ವಿವಿಧ ತಾಲ್ಲೂಕುಗಳ ಬೆಳೆ ಇಳುವರಿಯ ಕುರಿತಂತೆ ಜಿಲ್ಲಾಧಿಕಾರಿಗಳು ಒದಗಿಸಿರುವ ಅಂಕಿ ಅಂಶಗಳಿಗೆ ಕೃಷಿ ಇಲಾಖೆ ಹಾಗೂ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ನೀಡಿರುವ ಅಂಕಿ ಅಂಶಗಳು ತಾಳೆಯಾಗುತ್ತಿಲ್ಲದಿರುವುದನ್ನು ಚರ್ಚಿಸಲಾಯಿತು.

ಆದಕಾರಣ, ಇನ್ನು ಮುಂದೆ ಸಂಬಂಧಿಸಿದ ಜಿಲ್ಲಾಧಿಕಾರಿಗಳು ಅವರ ಅಧೀನದಲ್ಲಿ ಬರುವ ತಾಲ್ಲೂಕುಗಳಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಪ್ರಾಯೋಗಿಕ ಪರೀಕ್ಷಾರ್ಥ ಬೆಳೆ ಕಟಾವು ಪ್ರಯೋಗಗಳ ಬಗ್ಗೆ ಹಮ್ಮಿಕೊಂಡಿರುವ ಕಾರ್ಯಸೂಚಿಯನುಸಾರ ಆ ಇಲಾಖೆ, ಕಂದಾಯ ಇಲಾಖೆ ಹಾಗೂ ಕೃಷಿ ಇಲಾಖೆಗಳ ಅಧಿಕಾರಿಗಳು : ನೌಕರರೊಂದಿಗೆ ಜಂಟಿಯಾಗಿ ಸರಾಸರಿ ಬೆಳೆ ಇಳುವರಿಯ ಶೇಕಡಾವಾರು ಪ್ರಮಾಣವನ್ನು ನಿರ್ಧರಿಸಿ ಹಾಗೂ ಜಿಲ್ಲಾಧಿಕಾರಿಗಳು ಕರ್ನಾಟಕ ಭೂ ಕಂದಾಯ ನಿಯಮ 147 ರಡಿಯಲ್ಲಿನ

ಪ್ರತ್ಯಾಧಿಕಾರದನ್ವಯ ಪ್ರಕೃತಿ ವಿಕೋಪದಿಂದಾಗಿ ಹಾಗೂ ಬಿತ್ತನೆಯ ನಂತರ ಮಳೆಯಾಗದೇ., ಮರು ಬಿತ್ತನೆಗೆ ಅವಕಾಶವಿಲ್ಲದೆ ಬೆಳೆ ನಾಶವಾಗಿರುವ ತುರ್ತು ಪರಿಸ್ಥಿತಿಯನ್ನು ಪರಿಗಣಿಸಿ, ಮೇಲ್ಕಾಣಿಸಿರುವ ಇಲಾಖೆಗಳ ಸಹಯೋಗ : ಸಹಭಾಗಿತ್ವದೊಂದಿಗೆ ಜಂಟಿಯಾಗಿ ಸರಾಸರಿ ಶೇಕಡಾವಾರು ಬೆಳೆಯ ಇಳುವರಿಯನ್ನು ನಿರ್ಧರಿಸಿ ಭೂ ಕಂದಾಯವನ್ನು ಮನ್ನಾ ಮಾಡುವ ಬಗ್ಗೆ ದಿನಾಂಕ:13.5.2004 ರಿಂದ ಹೊಸದಾಗಿ ಪ್ರಸ್ತಾವನೆಯನ್ನು ಈ ಕೆಳಕಂಡ ನಮೂನೆಯಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

**ನಮೂನೆ**

-----------------ನೇ ಸಾಲಿನ ---------------ಜಿಲ್ಲೆಯ ಭೂ ಕಂದಾಯವನ್ನು ಮನ್ನಾ ಮಾಡುವ ವಿವರಗಳು

| ಕ್ರ. ಸಂ. | ತಾಲ್ಲೂಕಿನ ಹೆಸರು | ಬೆಳೆಗಳ ಆಣೇವಾರಿ ಪ್ರಮಾಣ | | ಮನ್ನಾ ಮಾಡಬೇಕಾದ ಭೂಕಂದಾಯದ ಪ್ರಮಾಣ (ರೂ.ಗಳಲ್ಲಿ) | |
|---|---|---|---|---|---|
| | | ಶೇಕಡಾ 25ಕ್ಕಿಂತ ಕಡಿಮೆ | ಶೇಕಡಾ 25ಕ್ಕಿಂತ ಹೆಚ್ಚು ಆದರೆ ಶೇಕಡಾ 50ಕ್ಕಿಂತ ಕಡಿಮೆ | ಶೇಕಡಾ 100 ರಷ್ಟು | ಶೇಕಡಾ 50ರಷ್ಟು |
| 1 | 2 | 3 | 4 | 5 | 6 |
| | | | | | |

ಜಿಲ್ಲಾ ಸಾಂಖ್ಯಿಕ ಅಧಿಕಾರಿ    ಜಿಲ್ಲಾ ಕೃಷಿ ಅಧಿಕಾರಿ:ಉಪನಿರ್ದೇಶಕರು ಕೃಷಿ ಇಲಾಖೆ    ಜಿಲ್ಲಾ ನೀರಾವರಿ ಅಧಿಕಾರಿ ಕಾರ್ಯನಿರ್ವಾಹಕ ಅಭಿಯಂತರರು ಬೃಹತ್ : ಮಧ್ಯಮ : ಸಣ್ಣ ನೀರಾವರಿ ಇಲಾಖೆ.

ಜಿಲ್ಲಾಧಿಕಾರಿಗಳು.-----------------------------ಜಿಲ್ಲೆ.

ಎಸ್.ಡಿ. ಸುಬ್ರಮಣ್ಯ
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಕಂದಾಯ)

ಪಿ.ಆರ್. 851

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಮಾನ್ಯ ಉಪ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ: ಉಮುಮಂ 69/2004, ದಿನಾಂಕ: 8.6.2004.
2. ಮಾನ್ಯ ಉಪ ಮುಖ್ಯ ಮಂತ್ರಿಯವರ ನಡವಳಿ ಸಂಖ್ಯೆ: ಉಮುಮಂ/ನ/64/2004, ದಿನಾಂಕ: 19.6.2004.
3. ಮಾನ್ಯ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ: ಸಿಎಂ/ಎಸ್‌ಸಿಎಂ 1131/04, ದಿನಾಂಕ: 21.6.2004.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 162 ಸಅಸೇ 2004 ದಿನಾಂಕ: 11.6.2004.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2004 ದಿನಾಂಕ: 2.7.2004.

**ಪ್ರಸ್ತಾವನೆ:**

ಮಾನ್ಯ ಉಪ ಮುಖ್ಯ ಮಂತ್ರಿಯವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 8.6.2004 ಟಿಪ್ಪಣಿಯಲ್ಲಿ ಶ್ರೀ ಎಂ.ರಾಮಯ್ಯ, ಗ್ರೂಪ್ ^ಎ^ ಅಧಿಕಾರಿ ಉಪ ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ ಇವರನ್ನು ತಮ್ಮ ವಿಶೇಷ ಕರ್ತವ್ಯಾಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ. ಹಾಗೂ ಮೇಲೆ ಕ್ರಮ ಸಂಖ್ಯೆ (2) ರಲ್ಲಿರುವ ಮಾನ್ಯ ಉಪ ಮುಖ್ಯ ಮಂತ್ರಿಯವರ ದಿನಾಂಕ: 19.6.2004ರ ನಡವಳಿಯಲ್ಲಿ ಉಪ ಮುಖ್ಯ ಮಂತ್ರಿಯವರ ಸಚಿವಾಲಯಕ್ಕೆ ಪ್ರಸ್ತುತ ಇರುವ ಹುದ್ದೆಗಳ ಜೊತೆಗೆ ಹೆಚ್ಚುವರಿಯಾಗಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವ ಬಗ್ಗೆ ಆದೇಶ ಹೊರಡಿಸುವಂತೆ ಮಾನ್ಯ ಮುಖ್ಯ ಮಂತ್ರಿಯವರನ್ನು ಕೋರಿರುತ್ತಾರೆ.

| | | |
|---|---|---|
| 1. | ಅಪರ ಆಪ್ತ ಕಾರ್ಯದರ್ಶಿ<br>(ಕೆ.ಎ.ಎಸ್.ನ ಕಿರಿಯ ಶ್ರೇಣಿ ಅಥವಾ ತತ್ಸಮಾನ ಹುದ್ದೆ) | 1 ಹುದ್ದೆ |
| 2. | ಸಾರ್ವಜನಿಕ ಸಂಪರ್ಕಾಧಿಕಾರಿ<br>(^ಎ^ ಗುಂಪಿನ ಅಧಿಕಾರಿ) | 1 ಹುದ್ದೆ |
| 3. | ಶಾಖಾಧಿಕಾರಿ<br>(^ಬಿ^ ಗುಂಪಿನ ಅಧಿಕಾರಿ–ಸಚಿವಾಲಯದ ಶಾಖಾಧಿಕಾರಿ ಅಥವಾ ಅದಕ್ಕೆ ತತ್ಸಮಾನ ಹುದ್ದೆ | 3 ಹುದ್ದೆಗಳು |
| 4. | ಆಪ್ತ ಸಹಾಯಕ | 6 ಹುದ್ದೆಗಳು |
| 5. | ಶೀಘ್ರಲಿಪಿಗಾರ | 6 ಹುದ್ದೆಗಳು |
| 6. | ಸಹಾಯಕ | 4 ಹುದ್ದೆಗಳು |
| 7. | ಬೆರಳಚ್ಚುಗಾರ | 6 ಹುದ್ದೆಗಳು |
| 8. | ವಾಹನ ಚಾಲಕ | 2 ಹುದ್ದೆಗಳು |
| 9. | ಜಮೇದಾರ್ | 1 ಹುದ್ದೆ |
| 10. | ದಲಾಯತ್ (ಗ್ರೂಪ್ ^ಡಿ^) | 12 ಹುದ್ದೆಗಳು |

ಈ ಪೈಕಿ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ದಿನಾಂಕ: 11.4.2004ರ ಆದೇಶದಲ್ಲಿ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಒಂದು ವಿಶೇಷ ಕರ್ತವ್ಯಾಧಿಕಾರಿ (^ಎ^ ವೃಂದ) ಹುದ್ದೆಯನ್ನು ಹಾಗೂ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 2.7.2004ರ ಸರ್ಕಾರದ ಆದೇಶದಲ್ಲಿ ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯಕ್ಕೆ ಒಂದು ಕಾರ್ಯದರ್ಶಿ ಹುದ್ದೆಯನ್ನು ಈಗಾಗಲೇ ಸೃಜಿಸಲಾಗಿರುತ್ತದೆ.

ಆದುದರಿಂದ ಉಪ ಮುಖ್ಯ ಮಂತ್ರಿಯವರ ಸಚಿವಾಲಯಕ್ಕೆ ಇನ್ನಿತರ ಹುದ್ದೆಗಳನ್ನು ಸೃಜಿಸುವ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 162 ಸಅಸೇ 2004, ಬೆಂಗಳೂರು, ದಿನಾಂಕ: 3ನೇ ಜುಲೈ 2004**

ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಪ್ರಸ್ತುತ ಉಪ ಮುಖ್ಯ ಮಂತ್ರಿಯವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಅಪರ ಆಪ್ತ ಕಾರ್ಯದರ್ಶಿ<br>(ಕೆ.ಎ.ಎಸ್.ನ ಕಿರಿಯ ಶ್ರೇಣಿ ಅಥವಾ ತತ್ಸಮಾನ ಹುದ್ದೆ) | 1 ಹುದ್ದೆ |
| 2. | ಸಾರ್ವಜನಿಕ ಸಂಪರ್ಕಾಧಿಕಾರಿ<br>(^ಎ^ ಗುಂಪಿನ ಅಧಿಕಾರಿ) | 1 ಹುದ್ದೆ |
| 3. | ಶಾಖಾಧಿಕಾರಿ<br>(^ಬಿ^ ಗುಂಪಿನ ಅಧಿಕಾರಿ–ಸಚಿವಾಲಯದ ಶಾಖಾಧಿಕಾರಿ ಅಥವಾ ಅದಕ್ಕೆ ತತ್ಸಮಾನ ಹುದ್ದೆ | 3 ಹುದ್ದೆಗಳು |
| 4. | ಆಪ್ತ ಸಹಾಯಕ | 6 ಹುದ್ದೆಗಳು |
| 5. | ಶೀಘ್ರಲಿಪಿಗಾರ | 6 ಹುದ್ದೆಗಳು |
| 6. | ಸಹಾಯಕ | 4 ಹುದ್ದೆಗಳು |
| 7. | ಬೆರಳಚ್ಚುಗಾರ | 6 ಹುದ್ದೆಗಳು |
| 8. | ವಾಹನ ಚಾಲಕ | 2 ಹುದ್ದೆಗಳು |
| 9. | ಜಮೇದಾರ್ | 1 ಹುದ್ದೆ |
| 10. | ದಲಾಯತ್ (ಗ್ರೂಪ್ ^ಡಿ^) | 12 ಹುದ್ದೆಗಳು |
| | ಒಟ್ಟು | **42 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1133/ವೆಚ್ಚ–5/2004, ದಿನಾಂಕ: 2.7.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 852

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2)

**ವಿಷಯ:** ಲೋಕೋಪಯೋಗಿ ಮತ್ತು ಇಂಧನ ಸಚಿವರಿಗೆ ಸಲಹೆಗಾರರನ್ನು ನೇಮಿಸುವ ಬಗ್ಗೆ.

**ಪ್ರಸ್ತಾವನೆ:**

ಲೋಕೋಪಯೋಗಿ ಮತ್ತು ಇಂಧನ ಸಚಿವರು ಲೋಕೋಪಯೋಗಿ ಮತ್ತು ಇಂಧನ ಇಲಾಖೆಗಳು ಪರಿಣಾಮಕಾರಿಯಾಗಿ ಕರ್ತವ್ಯ ನಿರ್ವಹಿಸಲು ಈ ಕೆಳಕಂಡ ಗುರಿಗಳನ್ನು ನಿಗದಿಪಡಿಸಿಕೊಂಡಿದ್ದಾರೆ.

1) ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ವಿಶ್ವಾಸಾರ್ಹ ಹಾಗೂ ಗುಣಮಟ್ಟದ ವಿದ್ಯುತ್ ಲಭ್ಯತೆಯನ್ನು ಉತ್ತಮಗೊಳಿಸುವುದು.

2) ವಿದ್ಯುತ್ ಉತ್ಪಾದನೆ ಮತ್ತು ಸರಬರಾಜಿನ ನಡುವೆ ಇರುವ ಅಂತರವನ್ನು ಕಡಿಮೆಗೊಳಿಸುವುದು ಹಾಗೂ ಪ್ರತಿಯೊಬ್ಬರಿಗೂ ಕೈಗೆಟುಕುವ ದರದಲ್ಲಿ ವಿದ್ಯುತ್ ಒದಗಿಸುವುದು.

3) ವಿದ್ಯುತ್ ಉತ್ಪಾದನೆ, ಪ್ರಸರಣ ಮತ್ತು ಸರಬರಾಜಿಗೆ ಸಂಬಂಧಿಸಿದಂತೆ ಹೊಸ ಯೋಜನೆಗಳನ್ನು ಕೈಗೆತ್ತಿಕೊಳ್ಳುವುದು.

4) ರಾಜ್ಯ ಹೆದ್ದಾರಿಗಳು ಮತ್ತು ಇತರೇ ಮುಖ್ಯ ರಸ್ತೆಗಳ ಸುರಕ್ಷೆ ಗುಣಮಟ್ಟ ಅಭಿವೃದ್ಧಿ ಮತ್ತು ಈ ರಸ್ತೆಗಳನ್ನು ಉಪಯೋಗಿಸುವ ಬಳಕೆದಾರರ ವೆಚ್ಚವನ್ನು ಕಡಿಮೆಗೊಳಿಸುವುದು.

5) ರಸ್ತೆಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಈಗಾಗಲೇ ಪ್ರಗತಿಯಲ್ಲಿರುವ ಕಾಮಗಾರಿಗಳಿಗೆ ಪೂರಕವಾಗಿ ಹಾಗೂ ದೀರ್ಘ ಕಾಲದಿಂದ ಬಾಕಿಯಿರುವ ಅಗತ್ಯತೆ ಮತ್ತು ಬೇಡಿಕೆಗಳನ್ನು ಪೂರೈಸಲು ಹೊಸ ಯೋಜನೆಗಳನ್ನು ಪ್ರಾರಂಭಿಸುವುದು.

2. ಈ ಮೇಲ್ಕಂಡ ಗುರಿಗಳನ್ನು ಸಾಧಿಸಲು ಹಾಗೂ ಲೋಕೋಪಯೋಗಿ ಮತ್ತು ಇಂಧನ ಇಲಾಖೆಗಳ ಆಡಳಿತವನ್ನು ಪರಿಣಾಮಕಾರಿಯಾಗಿ ನಡೆಸಲು ಸಚಿವರಿಗೆ ಒಬ್ಬ ಅನುಭವಿ ಹಾಗೂ ದೂರದೃಷ್ಟಿಯುಳ್ಳ ಸಲಹೆಗಾರರನ್ನು ನೇಮಿಸಲು ತೀರ್ಮಾನಿಸಲಾಗಿದೆ. ಆದುದರಿಂದ ಶ್ರೀ ಕೆ.ಸಿ. ರೆಡ್ಡಿ, ನಿವೃತ್ತ ಕಾರ್ಯದರ್ಶಿ, ಇವರನ್ನು ಲೋಕೋಪಯೋಗಿ ಮತ್ತು ಇಂಧನ ಇಲಾಖೆಗಳಿಗೆ ಸಂಬಂಧಿಸಿದಂತೆ ಸಚಿವರು ಅವರಿಗೆ ಕಳುಹಿಸುವ ವಿಷಯಗಳ ಮೇಲೆ ಸಚಿವರಿಗೆ ಸಲಹೆ ನೀಡಲು ಸಲಹೆಗಾರರನ್ನಾಗಿ ನೇಮಿಸಲು ಪ್ರಸ್ತಾಪಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಸೇಇಮು 2004, ಬೆಂಗಳೂರು, ದಿನಾಂಕ: 1ನೇ ಜುಲೈ 2004**

ಶ್ರೀ ಕೆ.ಸಿ. ರೆಡ್ಡಿ, ನಿವೃತ್ತ ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಇವರನ್ನು ಲೋಕೋಪಯೋಗಿ ಮತ್ತು ಇಂಧನ ಸಚಿವರ ಸಲಹೆಗಾರರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಪ್ರಸಕ್ತ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಶ್ರೀ ಕೆ.ಸಿ. ರೆಡ್ಡಿ ಇವರು ಲೋಕೋಪಯೋಗಿ ಮತ್ತು ಇಂಧನ ಸಚಿವರ ಸಲಹೆಗಾರರಾಗಿ ರಾಜ್ಯ ಸಚಿವರ ಸ್ಥಾನಮಾನ ಹೊಂದಿರುತ್ತಾರೆ.

ಶ್ರೀ ಕೆ.ಸಿ. ರೆಡ್ಡಿ ಇವರು ಲೋಕೋಪಯೋಗಿ ಮತ್ತು ಇಂಧನ ಸಚಿವರ ಸಲಹೆಗಾರರಾಗಿ ನಿರ್ವಹಿಸುವ ಕರ್ತವ್ಯಗಳು ಹಾಗೂ ನೀಡಲಾಗುವ ಸವಲತ್ತುಗಳ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 853

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಕೆ. ಪಾಟೀಲ್, ಡೆಪ್ಯೂಟಿ ಕಮಾಂಡೆಂಟ್, ಗೃಹ ರಕ್ಷಕ ದಳ ಇವರ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಮಹಾಸಮಾದೇಷ್ಟರ ಪತ್ರ ಸಂಖ್ಯೆ:ಸಿಬ್ಬಂದಿ (1) 79 ಸಿಜಿಓ 2000-01, ದಿನಾಂಕ:30.8.2002.
2. ಸರ್ಕಾರದ ನೋಟೀಸ್ ಸಂಖ್ಯೆ: ಒಇ 110 ಕಗೃಸೇ 2002, ದಿನಾಂಕ: 22.5.2003.
3. ಶ್ರೀ ಬಿ.ಕೆ. ಪಾಟೀಲ್, ಉಪ ಸಮಾದೇಷ್ಟರ, ಉತ್ತರ ದಿನಾಂಕ: 21.7.2003.

**ಪ್ರಸ್ತಾವನೆ:**

ಶ್ರೀ ಬಿ.ಕೆ. ಪಾಟೀಲ್, ಡೆಪ್ಯೂಟಿ ಕಮಾಂಡೆಂಟ್ ಗೃಹ ರಕ್ಷಕ ದಳ ಇವರು ಈ ಹಿಂದೆ ಮಂಡ್ಯ ಗೃಹರಕ್ಷಕ ದಳದ ಕಛೇರಿಯಲ್ಲಿ ದಿನಾಂಕ:7.12.92 ರಿಂದ 3.7.2000ರ ಅವಧಿಯಲ್ಲಿ ಡೆಪ್ಯೂಟಿ ಕಮಾಂಡೆಂಟ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಮೈಸೂರು ನಗರ ವಿಭಾಗದಲ್ಲಿ ನಿರ್ವಾಹಕರಾಗಿ ತಾತ್ಕಾಲಿಕ ಸೇವೆ ಸಲ್ಲಿಸಲು ಮಂಡ್ಯ ಜಿಲ್ಲಾ ಗೃಹರಕ್ಷಕ ದಳದಲ್ಲಿ ಸದಸ್ಯರಾಗಿ ಭರ್ತಿಗೊಳ್ಳದೇ ಇರುವ ಅಭ್ಯರ್ಥಿಗಳಿಗೆ ಗೃಹ ರಕ್ಷಕರೆಂದು ಸುಳ್ಳು ದೃಢೀಕರಣ ಪತ್ರಗಳನ್ನು ನೀಡುವ ಮೂಲಕ ಸಾರಿಗೆ ಸಂಸ್ಥೆ ಹಾಗೂ “ಅಭ್ಯರ್ಥಿಗಳಿಗೆ” ವಂಚಿಸಿರುತ್ತಾರೆಂದು ವಿಭಾಗೀಯ ನಿಯಂತ್ರಣಾಧಿಕಾರಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಮೈಸೂರು ವಿಭಾಗ ಅವರ ಪತ್ರ ಸಂಖ್ಯೆ:ಕರಾ ಸಂ:ಮೈನವಿ:ಸಿ:ಸೇ:2587:2000-01, ದಿನಾಂಕ: 11.10.2000 ರಲ್ಲಿ ಅವರ ಕಛೇರಿಗೆ ವರದಿ ಮಾಡಿದ್ದರೆಂದು ತಿಳಿಸಿದ್ದರ ಮೇರೆಗೆ ಈ ವಿಷಯದಲ್ಲಿ ಪೂರ್ವಭಾವಿ ತನಿಖೆ ಕೈಗೊಂಡು ವರದಿಯನ್ನು ಸಲ್ಲಿಸಲು ಮೈಸೂರು ಜಿಲ್ಲಾ ಗೃಹರಕ್ಷಕ ದಳದ ಸಮಾದೇಷ್ಟರನ್ನು ನೇಮಿಸಲಾಗಿ ಸಮಾದೇಷ್ಟರು ಪೂರ್ವಭಾವಿ ತನಿಖಾ ವರದಿ ಸಲ್ಲಿಸಿ ತನಿಖೆಯಲ್ಲಿ ಈ ಕೆಳಕಂಡ ಲೋಪದೋಷಗಳು ಕಂಡು ಬಂದಿರುವುದಾಗಿ ತಿಳಿಸಿದ್ದರು.

1) ಶ್ರೀ ಬಿ.ಕೆ. ಪಾಟೀಲ್‌ರ ಸೇವೆ ನಿರ್ವಹಣೆಯ ಕಾಲದಲ್ಲಿ ಅನೇಕ ಮಂದಿ ಗೃಹ ರಕ್ಷಕರಲ್ಲದವರಿಗೆ ಮಂಡ್ಯ ಜಿಲ್ಲೆಯ ಗೃಹರಕ್ಷಕರೆಂದು ಸುಳ್ಳು ದೃಢೀಕರಣ ಪತ್ರಗಳನ್ನು ನೀಡಿ ಅವರ ಅಧಿಕಾರ ದುರುಪಯೋಗ ಮಾಡಿದ್ದಾರೆ.
2) ನಿವೃತ್ತಿಗೆ ಕೇವಲ ಕೆಲವೇ ವರ್ಷಗಳಿರುವ ಈ ಹಿರಿಯ ಅಧಿಕಾರಿ ಪವಿತ್ರವಾದ ನಿಷ್ಕಾಮ ಸೇವೆ ನಿಸ್ವಾರ್ಥಿ ಸೇವಾ ಸಂಸ್ಥೆಯಾದ ಗೃಹ ರಕ್ಷಕ ದಳವು ಸಾರ್ವಜನಿಕರಲ್ಲಿ ಹಾಗೂ ಗೃಹ ರಕ್ಷಕರಲ್ಲಿ ಹೆಚ್ಚು ಅರಿವು ಮೂಡಿಸಬೇಕಾಗಿರುವ ಈ ವ್ಯಕ್ತಿ ಸ್ವತಃ ಸಂಸ್ಥೆಯ ಹಿತರಕ್ಷಣೆ ಹಾಗೂ ಹಾಲಿಯಾಗಿ ಸೇವೆ ಸಲ್ಲಿಸುತ್ತಿರುವ ಗೃಹರಕ್ಷಕರ ಅನುಕೂಲ ಹಾಗೂ ಏಳಿಗೆಯ ಬಗ್ಗೆ ಚಿಂತಿಸದೇ ಅಕ್ಷಮ್ಯ ಅಪರಾಧವೆಸಗಿದ್ದಾರೆ.
3) ಶ್ರೀ ಬಿ.ಕೆ. ಪಾಟೀಲರು, ಗೃಹರಕ್ಷಕ ಸಂಸ್ಥೆಯ ಮೇಲೆ ಒಬ್ಬ ಪೂರ್ಣ ಸಂಬಳ ಪಡೆಯುವ ಅಧಿಕಾರಿಯಾಗಿದ್ದು ಅವರು ಉಪ ಸಮಾದೇಷ್ಟರ ದರ್ಜೆಗೆ ಬಡ್ತಿ ಪಡೆದು ಸಂಸ್ಥೆಯ ನಿಯಮಗಳ ಅರಿವಿರಬೇಕಾಗಿರುವ ಇವರು ಯಾವುದೇ ಸೇವಾ ದೃಢೀಕರಣ ಪತ್ರ ನೀಡುವಾಗ ದೃಢೀಕರಣ ಪಡೆಯುವ ಅಭ್ಯರ್ಥಿಯ ಮೆಟಲ್ ಸಂಖ್ಯೆ: ಸೇವಾ ವಿವರಗಳನ್ನೊಳಗೊಂಡ ಕೋರಿಕೆಯ ಪತ್ರಗಳನ್ನು ಪರಿಶೀಲಿಸಿರುವ ಘಟಕಾಧಿಕಾರಿ ಹಾಗೂ ಬೋಧಕರ ಷರಾ ಇತ್ಯಾದಿಗಳ ಬಗ್ಗೆ ಕನಿಷ್ಟ ನಿಗಾವಹಿಸಿಲ್ಲ ಹಾಗೂ ಈ ಬಗ್ಗೆ ಮಂಡ್ಯ ಜಿಲ್ಲಾ ಸಮಾದೇಷ್ಟರು ಜಿಲ್ಲಾ ಗೃಹರಕ್ಷಕ ಸಂಸ್ಥೆಗೆ ಸಂಬಂಧಪಟ್ಟ ಇತರೆ ಅಧಿಕಾರಿ ಹಾಗೂ ಕಛೇರಿ ಸಿಬ್ಬಂದಿಗಳನ್ನು ದೂರವಿಟ್ಟು ತಮಗೆ ಬೇಕಾದವರಿಗೆ ಗೃಹರಕ್ಷಕರಲ್ಲದವರಿಗೆಲ್ಲಾ ಸೇವಾ ದೃಢೀಕರಣ ಪತ್ರ ನೀಡಿ ವಂಚಿಸಿದ್ದಾರೆ.
4) ಶ್ರೀ ಬಿ.ಕೆ. ಪಾಟೀಲರು, ಗೃಹ ರಕ್ಷಕರೆಂದು ತಾವು ನೀಡಿರುವ ಸೇವಾ ದೃಢೀಕರಣ ಪತ್ರಗಳಲ್ಲಿ ಇತರರ ಹೆಸರನ್ನು ಯಾರೋ ಸೇರಿಸಿದ್ದಾರೆಂದು ಮೌಖಿಕವಾಗಿ ಹಾಗೂ ಲಿಖಿತವಾಗಿ ವಿಚಾರಣಾ ಸಮಯದಲ್ಲಿ ತಿಳಿಸಿರುವುದರಿಂದ ಇದರಲ್ಲಿ ಎಷ್ಟರ ಮಟ್ಟಿಗೆ ಸತ್ಯಾಂಶವಿದೆ ಬೇರೆಯವರು ಎಷ್ಟು ಹೆಸರುಗಳನ್ನು ಗೃಹರಕ್ಷಕರೆಂದು ಯಾರು ಸೇರಿಸಿದ್ದಾರೆ ಅಥವಾ ಶ್ರೀ ಬಿ.ಕೆ. ಪಾಟೀಲರೊಂದಿಗೆ ಕೆ.ಎಸ್.ಆರ್.ಟಿ.ಸಿ.ಯ ಅಥವಾ ಇತರೆ ಯಾರಾದರೂ ಷಾಮೀಲಾಗಿದ್ದಾರೆಯೇ ಎಂಬುದರ ಬಗ್ಗೆ ನಿಜಾಂಶ ತಿಳಿಯಲು ಈ ವಿಷಯವಾಗಿ ಹೆಚ್ಚಿನ ತನಿಖೆಯಾಗಬೇಕಾಗಿರುತ್ತದೆ.

ಮೇಲೆ ಸೂಚಿಸಿರುವ ಹಿನ್ನೆಲೆಯಲ್ಲಿ ಸತ್ಯಾಂಶವನ್ನು ಅರಿಯಲು ಈ ಪ್ರಕರಣದ ವಿಚಾರಣೆಯನ್ನು ಉಪಲೋಕಾಯುಕ್ತರಿಂದ ಮಾಡಿಸಲು ಸೂಕ್ತ ಆದೇಶ ಹೊರಡಿಸಲು ಮಹಾಸಮಾದೇಷ್ಟರು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿದ್ದರು. ಮೇಲೆ ಓದಲಾದ (2)ರ ದಿನಾಂಕ: 28.5.2003ರಲ್ಲಿ ನೋಟೀಸ್ ನೀಡಿ ಸಮಜಾಷಿಯನ್ನು ಕೇಳಲಾಗಿತ್ತು. ಶ್ರೀ ಬಿ.ಕೆ. ಪಾಟೀಲ್, ಉಪ ಸಮಾದೇಷ್ಟರು ಮೇಲೆ ಓದಲಾದ (3)ರಲ್ಲಿ ದಿನಾಂಕ: 21.7.2003ರಂದು ಉತ್ತರ ಸಲ್ಲಿಸಿ ತನ್ನ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ಕಂಡುಕೊಳ್ಳುವುದು ಅತ್ಯಾವಶ್ಯಕವಾಗಿದೆ ಎಂದು ಸರ್ಕಾರವು ತೀರ್ಮಾನಿಸಿ ಈ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 110 ಕಗೃಸೇ 2002, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಕೆ. ಪಾಟೀಲ್ ಉಪ ಸಮಾದೇಷ್ಟರು, ಗೃಹರಕ್ಷಕದಳ ಅವರ ವಿರುದ್ಧ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಕುಲಕರ್ಣಿ ರಾಮ್‌ರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ರಾಯಚೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಈ ವಿಚಾರಣೆಗಾಗಿ ಅವರಿಗೆ ರೂ.5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ನೀಡಲಾಗುವುದು ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ: 4.3.2002ರಲ್ಲಿ ನಿಗದಿಪಡಿಸಿರುವಂತೆ ಅವರು ವಾಹನ ಭತ್ಯೆ ಪಡೆಯುತ್ತಾರೆ.

2. ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಾಯಕ ಆಡಳಿತಾಧಿಕಾರಿ ಗೃಹರಕ್ಷಕದಳ ಇಲಾಖೆ, ಬೆಂಗಳೂರು ಕೇಂದ್ರಸ್ಥಾನ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಶೀಘ್ರಲಿಪಿಗಾರರ ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಾಗ್ರಿಗಳನ್ನು ಒದಗಿಸಲು ಉಪ ಮಹಾಸಮಾದೇಷ್ಟರು, ಗೃಹರಕ್ಷಕ ದಳ ಇಲಾಖೆ, ಕೇಂದ್ರಸ್ಥಾನ, ಬೆಂಗಳೂರು ರವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳೊಳಗಾಗಿ ಕಡ್ಡಾಯವಾಗಿ ಮುಗಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 854

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 334 ಎಸ್ಎಎಸ್ 2004, ದಿನಾಂಕ: 26.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 26.6.2004ರ ಅಧಿಸೂಚನೆಯಲ್ಲಿ ಶ್ರೀ ಬ್ರಹ್ಮದತ್, ಐ.ಎ.ಎಸ್. ಇವರನ್ನು ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ನಿಮ್ನೀಕರಿಸಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಬ್ರಹ್ಮದತ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಸಸಿವಿ 2004, ಬೆಂಗಳೂರು, ದಿನಾಂಕ: 17ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಬ್ರಹ್ಮದತ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿದೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಅಶಿಸೇ 2003, ದಿನಾಂಕ: 14.7.2003ರಲ್ಲಿ ವಿವರಿಸಿರುವಂತೆ ಇವರ ಆಪ್ತ ಶಾಖೆಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ನಿಗದಿಪಡಿಸಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1. ಆಪ್ತ ಕಾರ್ಯದರ್ಶಿ, - 1 ಹುದ್ದೆ
   ಆಪ್ತ ಕಾರ್ಯದರ್ಶಿ ಗ್ರೇಡ್-2, ಪತ್ರಾಂಕಿತ ಆಪ್ತ ಸಹಾಯಕ : ಶಾಖಾಧಿಕಾರಿ
2. ಶೀಘ್ರಲಿಪಿಗಾರರು (ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ) - 2 ಹುದ್ದೆಗಳು
3. ಭಾಷಾಂತರಕಾರರು (ಶಾಖಾಧಿಕಾರಿ : ಹಿರಿಯ ಸಹಾಯಕ : ಪತ್ರಾಂಕಿತ ಆಪ್ತ ಸಹಾಯಕ) - 1 ಹುದ್ದೆ

4. ಸಹಾಯಕ (ಸಹಾಯಕ : ಕಿರಿಯ ಸಹಾಯಕ) - 1 ಹುದ್ದೆ
5. ವಾಹನ ಚಾಲಕ - 1 ಹುದ್ದೆ
6. ದಲಾಯತ್ - 2 ಹುದ್ದೆಗಳು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2)

ಪಿ.ಆರ್. 855

**ವಿಷಯ:** ಶ್ರೀ ಎಂ. ರಾಜಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಜಲ ಮತ್ತು ನೆಲ ನಿರ್ವಹಣಾ ಸಂಸ್ಥೆ, ಧಾರವಾಡ ಇವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿಗಳನ್ನು ಬದಲಾಯಿಸಿ ಹೊಸ ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಎಸ್‌ಇಎನ್ 96, ದಿನಾಂಕ: 10.4.2000.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಎಸ್‌ಇಎನ್ 96, ದಿನಾಂಕ: 4.12.2000.
3. ಶ್ರೀ ಬಿ. ರಂಗಸ್ವಾಮಿ ನಿವೃತ್ತ ನ್ಯಾಯಾಧೀಶರ ಪತ್ರ ದಿನಾಂಕ: 12.7.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 10.4.2000ದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ರಾಜಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಇಲಾಖಾ ವಿಚಾರಣೆ ಮಾಡಲು ಶ್ರೀ ಎನ್.ಆರ್. ಕಂಚಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದರೆ ಶ್ರೀಯುತರು ತಮಗೆ ಆಸಕ್ತಿ ಇಲ್ಲವೆಂದು ತಿಳಿಸಿದ ಹಿನ್ನೆಲೆಯಲ್ಲಿ ಶ್ರೀ ಎನ್.ಆರ್. ಕಂಚಿ ಅವರ ಸ್ಥಾನದಲ್ಲಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ವೈ.ಆರ್. ಸಾವಕಾರ್, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಆದರೆ ಶ್ರೀಯುತರು ಹಲವು ನೆನಪೋಲೆಗಳನ್ನು ಬರೆದರೂ ಪ್ರತಿಕ್ರಿಯಿಸದೇ ಇರುವುದರಿಂದ, ಶ್ರೀಯುತರ ಸ್ಥಾನದಲ್ಲಿ ಬೇರೊಬ್ಬರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲು ಪರಿಶೀಲಿಸಿದೆ. ಅದರಂತೆ ಉಲ್ಲೇಖ (3)ರ ಪತ್ರದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಹಮತಿ ನೀಡಿರುವ ಹಿನ್ನೆಲೆಯಲ್ಲಿ ಈ ಮುಂದಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಆಸುಇ 68 ಎಸ್‌ಇಎನ್ 96, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಉಪ ನಿಯಮ (2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಮೇಲೆ (2)ರಲ್ಲಿ ಓದಲಾದ ದಿನಾಂಕ: 4.12.2000ದಲ್ಲಿ ಶ್ರೀ ಸಾವುಕಾರ್ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿದ ಆದೇಶವನ್ನು ರದ್ದುಪಡಿಸಿ ಅವರ ಸ್ಥಾನದಲ್ಲಿ ಶ್ರೀ ಎಂ. ರಾಜಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್‌ರವರ ವಿರುದ್ಧ ಇಲಾಖಾ ವಿಚಾರಣೆ ಮಾಡುವ ಸಲುವಾಗಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಮಂಡನಾಧಿಕಾರಿಯಾಗಿ ಅಧೀನ ಕಾರ್ಯದರ್ಶಿ (ತಾಂತ್ರಿಕ-1) ನೀರಾವರಿ ಇಲಾಖೆ ಅವರೇ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-3)

ಪಿ.ಆರ್. 856

## ENERGY SECRETARIAT

**Sub:** Karnataka Electricity Regulatory Commission - Release of the amount to KERC out of the provision made in the Budget Estimates for the year 2004-05 - Orders reg.

**Read:** Letter No.F/01/1/929 dated 14.6.2004.

**Preamble:-**

A sum of Rs.320.50 lakhs has been provided in the Budget estimates for the year 2004-05 under the Head of Account 2801-80-101-1-07-KERC-101-GIA (Non-Plan). In the letter dated 14.6.2004 read above, Secretary, KERC has requested to recoup the Permanent Imprest by releasing Rs.44.64 lakhs to meet the expenditures in the First quarter of the year 2004-2005 (based on actual expenditure) in order to maintain the balance of Rs.75 lakhs in the Permanent Imprest Account sanctioned vide G.O. dated 19.10.2002. Hence, this order.

**Government Order No. DE 30 PSR 2001, Bangalore, Dated: 2nd August 2004**

In the circumstances explained in the preamble, Government are pleased to release, the amount of Rs.44.64 lakhs (Rupees Forty Four Lakhs and Sixty Four Thousand only) based on the actual expenditure incurred by the Karnataka Electricity Regulatory Commission (KERC) under the Head of Account "2801-80-101-1 -07- KERC-101- GIA (non-Plan)" to meet the expenditure for the First (I) Quarter of the year 2004-05 and to maintain the balance of Rs.75 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No. FD/1174/Exp-1/2004 dated 20.7.2004.

By Order and in the name of the Governor of Karnataka,

**K.L. JAYARAM**

P.R. 857

Under Secretary to Government,
Energy Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಬಿ.ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಪಿ.ರಾಮಪ್ಪ, ನಿವೃತ್ತ ಶಿರಸ್ತೆದಾರ್, ಶ್ರೀ ಸಿ.ಕೃಷ್ಣಪ್ಪ ಮತ್ತು ಶ್ರೀ ಓ.ರಾಮಕೃಷ್ಣ ಪ್ರ.ದ.ಸ. ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇ ವರುಗಳ ವಿರುದ್ಧ ಜಂಟಿ ಇ ಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಕ್ರಮಾಂಕ ಸಿಆಸುಇ 48 ಎಸ್.ಇ ಎನ್ 2003 ದಿನಾಂಕ 12.12.03.
2. ಶ್ರೀ ಬಿ.ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿ ಇ ವರ ದಿನಾಂಕ 17.1.2004ರ ಲಿಖಿತ ಉತ್ತರ.
3. ಶ್ರೀ ಬಿ.ರಾಮಪ್ಪ, ನಿವೃತ್ತ ಶಿರಸ್ತೆದಾರ ಇ ವರ ದಿನಾಂಕ 21.1.2004ರ ಲಿಖಿತ ಉತ್ತರ.
4. ಶ್ರೀ ಸಿ.ಕೃಷ್ಣಪ್ಪ, ಪ್ರ.ದ.ಸ. ಇ ವರ ದಿನಾಂಕ 21.1.2004ರ ಲಿಖಿತ ಉತ್ತರ
5. ಶ್ರೀ ಓ.ರಾಮಕೃಷ್ಣ, ಪ್ರ.ದ.ಸ. ಇ ವರ ದಿನಾಂಕ 12.1.2004ರ ಲಿಖಿತ ಉತ್ತರ

**ಪ್ರಸ್ತಾವನೆ:**

ಶ್ರೀ ಬಿ.ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಪಿ.ರಾಮಪ್ಪ, ನಿವೃತ್ತ ಶಿರಸ್ತೆದಾರ್ ಇ ವರು ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇ ಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ವ್ಯವಸ್ಥಾಪಕ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶಿವಮೊಗ್ಗ ತಾಲ್ಲೂಕು ಅನುಪಿನಕಟ್ಟೆ ಗ್ರಾಮದ ಸರ್ವೆ ನಂ.30, 31, 32/2, 34, 73/1ರ ಪೈಕಿ, 73/2ರ ಪೈಕಿ 74ರ ಸರ್ವೆ ನಂಬರುಗಳಲ್ಲಿನ ಜಮೀನುಗಳಿಗೆ ತಮ್ಮ ಕಛೇರಿಯಲ್ಲಿ ಶಿವಮೊಗ್ಗದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯ ಖಾಲಿ ಚೆಕ್ ಹಾಳೆಗಳು ಲಭ್ಯವಿದ್ದರೂ ಅವುಗಳನ್ನು ಉಪಯೋಗಿಸದೆ ಪ್ರತ್ಯೇಕವಾಗಿ ಮೇಲ್ಕಂಡ ಬ್ಯಾಂಕಿನಿಂದ 10 ಖಾಲಿ ಚೆಕ್ ಹಾಳೆಗಳನ್ನು ಪಡೆದು ಅದೇ ದಿನ ರೂ.8,14,520/- ಗಳನ್ನು ಪರಿಹಾರಧನವನ್ನಾಗಿ ಪಾವತಿಸುವ ಮೂಲಕ ಸರ್ಕಾರದ ಹಣಕಾಸು ನಿಯಮಾವಳಿಗಳನ್ನು ಮತ್ತು ಸರ್ಕಾರದ ಕಾರ್ಯ ವಿಧಾನವನ್ನು ಉಲ್ಲಂಘಿಸಿ ದುರ್ನಡತೆ ಎಸಗಿದ್ದಾರೆ. ಶ್ರೀ ಪಿ.ರಾಮಪ್ಪ, ವ್ಯವಸ್ಥಾಪಕರು, ಜವಾಬ್ದಾರಿಯುತ ಸ್ಥಾನದಲ್ಲಿ ಇ ದ್ದುಕೊಂಡು ದಿನಾಂಕ 20.2.2002 ರಂದು ಮೇಲಧಿಕಾರಿಗಳ ಅನುಮತಿ ಪಡೆಯದೇ ಕೆಲಸಕ್ಕೆ ಗೈರು ಹಾಜರಾಗಿ ಕೆ.ಸಿ.ಎಸ್ (ನಡತೆ) ನಿಯಮ ಉಲ್ಲಂಘಿಸಿರುವ ಅಪರಾಧ ಎಸಗಿದ್ದಾರೆ. ಶ್ರೀ ಸಿ.ಕೃಷ್ಣಪ್ಪ ಮತ್ತು ಶ್ರೀ ಓ.ರಾಮಕೃಷ್ಣ ಪ್ರ.ದ.ಸ ಗಳು ಮೇಲ್ಕಂಡ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶಿವಮೊಗ್ಗ ತಾಲ್ಲೂಕು ಅನುಪಿನ ಕಟ್ಟೆ ಗ್ರಾಮದ ಸರ್ವೆ ನಂ.30, 31, 32/2, 34, 73/1ರ ಪೈಕಿ, 73/2ರ ಪೈಕಿ 74ರ ಜಮೀನುಗಳ ಭೂ ಮಾಲೀಕರಿಗೆ ಅವಾರ್ಡ್ ತಿಳುವಳಿಕೆಯನ್ನು ದಿನಾಂಕ 8.1.2002, 22.2.2002, 15.2.2002ನೇ ದಿನಾಂಕಗಳಲ್ಲಿ ಹಾಜರಾಗುವಂತೆ ಅವರುಗಳಿಗೆ ತಿಳಿಸಿದ ದಿನಾಂಕದಂದು ಪರಿಹಾರಧನ ಪಾವತಿ ಮಾಡದೆ ದಿನಾಂಕ 20.2.2002 ರಂದು ಚೆಕ್ ಹಾಗೂ ನಗದು ವಹಿಯ ಅಮೂಲ್ಯ ದಾಖಲೆಗಳನ್ನು ಹೊಂದಿದ ಮೇಲ್ವಿಚಾರಕರಾದ ವ್ಯವಸ್ಥಾಪಕರು ಕಛೇರಿಯಲ್ಲಿ ದಿನಾಂಕ 20.2.2002 ರಂದು ಹಾಜರಿಲ್ಲದ ಸಂದರ್ಭದಲ್ಲಿ ಕಡತ ಮಂಡಿಸಿ ಶಿವಮೊಗ್ಗ ಸ್ಟೇಟ್ ಬ್ಯಾಂಕ್ ಮೈಸೂರುನಿಂದ ಚೆಕ್ ಹಾಳೆಗಳನ್ನು ಪಡೆದು 7 ಜನರಿಗೆ ರೂ.8,14,520/- ಪರಿಹಾರಧನ ಪಾವತಿಸಿ ಅಪರಾಧ ಎಸಗಿ ಕೆ.ಸಿ.ಎಸ್ (ನಡತೆ) ನಿಯಮಾವಳಿ 1966ರ ನಿಯಮ 3(i),(ii),(iii) ಗಳನ್ನು ಉಲ್ಲಂಘಿಸಿ ಅಪರಾಧ ಎಸಗಿರುತ್ತಾರೆ. ಈ ಬಗ್ಗೆ ಮೇಲೆ 1ರಲ್ಲಿ ಓದಲಾದ ದಿನಾಂಕ 12.12.2003 ರ ನೋಟೀಸ್ ಜಾರಿ ಮಾಡುವ ಮೂಲಕ ಅವರುಗಳ ವಿರುದ್ಧ ಜಂಟಿ ಇ ಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್ ಗೆ ಆರೋಪಿತ ಅಧಿಕಾರಿ/ನೌಕರರು ಮೇಲೆ ಕ್ರ.ಸಂ. 2 ರಿಂದ 5 ಓದಲಾದ ಲಿಖಿತ ಉತ್ತರಗಳನ್ನು ನೀಡಿ ತಮ್ಮ ಮೇಲಿನ ದೋಷಾರೋಪಣೆಗಳನ್ನು ನಿರಾಕರಿಸಿರುತ್ತಾರೆ. ಆರೋಪಿತರು ನೀಡಿರುವ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣುವ ರೀತಿಯಲ್ಲಿ ಇ ಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಎಸ್ಇ ಎನ್ 2003, ಬೆಂಗಳೂರು, ದಿನಾಂಕ: 31ನೇ ಜುಲೈ 2004

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿ ಹಾಗೂ ಶ್ರೀ ಪಿ.ರಾಮಪ್ಪ, ನಿವೃತ್ತ ಶಿರಸ್ತೆದಾರ್ ಇ ವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿ.ಕೃಷ್ಣಪ್ಪ, ಪ್ರ.ದ.ಸ. ಹಾಗೂ ಓ.ರಾಮಕೃಷ್ಣ, ಪ್ರ.ದ.ಸ. ಈ ಎಲ್ಲ ಮೇಲ್ಕಂಡ ನಾಲ್ಕೂ ಅಧಿಕಾರಿ/ನೌಕರರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ ತ್ರಿಪುರಾಂತಕ ಸ್ವಾಮಿ, ನಿವೃತ್ತ ಸೆಷನ್ಸ್ ಮತ್ತು ಜಿಲ್ಲಾ

ನ್ಯಾಯಾಧೀಶರು, ದಾವಣಗೆರೆ ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಇ ವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇ ವಿ 96 ದಿನಾಂಕ 24.4.98 ರಂತೆ ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇ ವಿ 2001 ದಿನಾಂಕ 4.3.2002 ರಂತೆ ವಾಹನಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಾವಣಗೆರೆ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರು ಇ ವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸಲು ಮಂಡನಾಧಿಕಾರಿಗಳು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳ ಒಳಗಾಗಿ ಮುಕ್ತಾಯಗೊಳಿಸಿ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 858 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ (ಡಿ.ಡಿ.ಪಿ.ಇ.ಆರ್) ಯಲ್ಲಿ ಅಸ್ಥಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಪರಿವರ್ತಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 334 ಎಸ್‌ಎಎಸ್ 2004, ದಿನಾಂಕ: 26.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 26.6.2004ರ ಅಧಿಸೂಚನೆಯಲ್ಲಿ ಶ್ರೀ ಬಿ.ಕೆ. ದಾಸ್, ಐ.ಎ.ಎಸ್. ಇವರನ್ನು ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಉನ್ನತೀಕರಿಸಲಾದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಈ ಕಾರಣದಿಂದಾಗಿ ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿ ಪ್ರಸ್ತುತ ಅಸ್ಥಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಬಿ.ಕೆ. ದಾಸ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಪರಿವರ್ತಿಸುವ ಅಗತ್ಯತೆ ಇರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 53 ಸಸಿವಿ 2004, ಬೆಂಗಳೂರು, ದಿನಾಂಕ: 19ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ಪ್ರಸ್ತುತ ಅಸ್ಥಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಬಿ.ಕೆ. ದಾಸ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ - ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಪರಿವರ್ತಿಸಲು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ನಿಗದಿಪಡಿಸಿರುವಂತೆ ಈ ಹುದ್ದೆಗೆ ಹೊಂದಿಕೊಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ನಿಗದಿಪಡಿಸಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕಡತ ಸಂಖ್ಯೆ: ಸಿಆಸುಇ 85 ಸಸಿವಿ 2003 ರಲ್ಲಿ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 2014 ವೆಚ್ಚ-5:2003, ದಿನಾಂಕ: 27.11.2003ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 859 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2)

**ವಿಷಯ:** ಶ್ರೀ ಮಂಜೇಗೌಡ, ಅಧೀನ ಕಾರ್ಯದರ್ಶಿ (ಸೇವೆಗಳು) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಿದ್ದಕ್ಕೆ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: 48 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 6.8.2002.

2. ಶ್ರೀ ಮಂಜೇಗೌಡರ ದಿನಾಂಕ: 4.6.2004ರ ಮನವಿ.

3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 99 ದಿನಾಂಕ: 14.3.2000.

**ಪ್ರಸ್ತಾವನೆ:**

ಶ್ರೀ ಎಂ. ಸುಬ್ರಮಣಿ, ಅಪರ ನಿರ್ದೇಶಕರು ಮತ್ತು ಶ್ರೀ ಕೆ. ತಿಮ್ಮಪ್ಪ, ಹಿರಿಯ ಭೂ ವಿಜ್ಞಾನಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 6.8.2002ರ ಸರ್ಕಾರಿ ಆದೇಶದಲ್ಲಿ

ಶ್ರೀ ಮಂಜೇಗೌಡ, ಅಧೀನ ಕಾರ್ಯದರ್ಶಿ (ಸೇವೆಗಳು) ವಾಣಿಜ್ಯ ಮತ್ತು ಕೈಗಾರಿಕೆ, ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಬಗ್ಗೆ ವಿಚಾರಣೆ ಮುಕ್ತಾಯಗೊಂಡಿರುತ್ತದೆ ಎಂದು ತಿಳಿಸಿ ದಿನಾಂಕ: 11.8.2003 ರಿಂದ 24.1.2004 ವರೆಗಿನ ಅವಧಿಯಲ್ಲಿ ಒಟ್ಟು 11 ದಿನಗಳ ಕಾಲ ಮಂಡನಾಧಿಕಾರಿಯು ಕಾರ್ಯನಿರ್ವಹಿಸಿದ್ದು ಈ ಸಂಬಂಧ ಮಂಡನಾಧಿಕಾರಿಗಳಿಗೆ ಅರ್ಹವಿರುವ ಸಂಭಾವನೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 98 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 1ನೇ ಜುಲೈ 2004**

ಸರ್ಕಾರವು ಶ್ರೀ ಮಂಜೇಗೌಡ, ಅಧೀನ ಕಾರ್ಯದರ್ಶಿ (ಸೇವೆಗಳು) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ರವರು ಪ್ರಸ್ತುತ ಪ್ರಕರಣದಲ್ಲಿ ದಿನಾಂಕ:11.8.2003 ರಿಂದ 24.1.2004ರ ವರೆಗಿನ ಅವಧಿಯಲ್ಲಿ ಒಟ್ಟು 11 ದಿನಗಳ ಕಾಲ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಿರುವುದಕ್ಕೆ ವಿಚಾರಣೆ ದಿನ ಒಂದಕ್ಕೆ ಅವರ ಮೂಲ ವೇತನದ ಶೇಕಡ 10 ರಂತೆ ಗರಿಷ್ಠ ರೂ. 100-00 ರಂತೆ ಸಂಭಾವನೆಯನ್ನು ಮಂಜೂರು ಮಾಡಿದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052-ಸಚಿವಾಲಯ ಸಾಮಾನ್ಯ ಸೇವೆಗಳು-090 ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ.014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 860 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-3)

**ವಿಷಯ:** ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 306 ಎಸ್‌ಎಎಸ್ 2004, ದಿನಾಂಕ: 11.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 11.6.2004ರ ಅಧಿಸೂಚನೆಯಲ್ಲಿ ಶ್ರೀ ಕೆ.ಆರ್. ಶ್ರೀನಿವಾಸ್, ಐ.ಎ.ಎಸ್. ಇವರನ್ನು ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಹೊಸದಾಗಿ ಸೃಜಿಸಲಾದ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಈ ಕಾರಣದಿಂದಾಗಿ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಸಸಿವಿ 2004, ಬೆಂಗಳೂರು, ದಿನಾಂಕ: 2ನೇ ಜುಲೈ 2004**

ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಶ್ರೀ ಕೆ.ಆರ್. ಶ್ರೀನಿವಾಸ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1070:ವೆಚ್ಚ-5:2004, ದಿನಾಂಕ: 1.7.2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 861 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-2)

**ವಿಷಯ:** ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ, ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000, ದಿನಾಂಕ: 8.1.2003.

2. ಶ್ರೀ ಬಿ. ದಯಾನಂದ ಮುಖ್ಯ ಇಂಜಿನಿಯರ್‌ರವರ ದಿನಾಂಕ: 17.1.2003ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ರವರು, ನೀರಾವರಿ ಇಲಾಖೆಯ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ಆಗಿ ಮೈಸೂರಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಮೈಸೂರು ವಲಯಕ್ಕೆ ಜನವರಿ 2000ರ ಮಾಹೆಯಲ್ಲಿ ಸರ್ಕಾರದಿಂದ ಬಿಡುಗಡೆಗೊಳಿಸಲ್ಪಟ್ಟ ಒಟ್ಟು ಹಣ ಭರವಸೆ ಪತ್ರದ (ಎಲ್.ಓ.ಸಿ.) ಮೊತ್ತದಲ್ಲಿ ಶೇಕಡ 3 ರಷ್ಟನ್ನು ನೀರಾವರಿ ಇಲಾಖೆಯ ಕಾರ್ಯದರ್ಶಿಗಳ ವಿವೇಚನೆಗೆ ಮೀಸಲಿಟ್ಟಿದ್ದು, ಸದರಿ ಹಣವನ್ನು ಅವರ ಅನುಮೋದನೆ ಪಡೆದ ನಂತರವೇ ವಿತರಿಸಬೇಕೆಂಬ ಸ್ಪಷ್ಟ ಸೂಚನೆಯನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ನೀಇ 209 ಎಂಎಂಕೆ 99 ದಿನಾಂಕ: 1.1.2000ದ ಕಂಡಿಕೆ 2-7ರಲ್ಲಿ ನೀಡಿದ್ದಾಗ್ಯೂ ಸದರಿ ಸೂಚನೆಯನ್ನು ಉಲ್ಲಂಘಿಸಿ, ಸರ್ಕಾರದ ಕಾರ್ಯದರ್ಶಿಗಳ ಅನುಮೋದನೆ ಪಡೆಯದೇ ತಮ್ಮ ವ್ಯಾಪ್ತಿಯಲ್ಲಿದ್ದ ವಿಭಾಗಗಳಿಗೆ ವಿತರಿಸಿರುತ್ತಾರೆ. ಒಬ್ಬ ಜವಾಬ್ದಾರಿಯುತ ಹಿರಿಯ

ಅಧಿಕಾರಿಯಾಗಿದ್ದು ಸರ್ಕಾರದ ಸೂಚನೆ ಮತ್ತು ಆದೇಶಗಳನ್ನು ಉಲ್ಲಂಘಿಸಿರುವುದು ಒಬ್ಬ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯದ್ದಾಗಿದ್ದು, ತೀವ್ರ ಸ್ವರೂಪದ ದುರ್ನಡತೆಯ ಆರೋಪಗಳಿಗಾಗಿ ಶ್ರೀ ಬಿ. ದಯಾನಂದ ಮುಖ್ಯ ಇಂಜಿನಿಯರ್ ರವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 8.1.2003ರ ನೋಟೀಸ್ ನೀಡಿ ಸಮಜಾಯಿಷಿಯನ್ನು ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 17.1.2003ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ಕಂಡುಕೊಳ್ಳುವುದು ಅತ್ಯವಶ್ಯಕವಾಗಿದೆ ಎಂದು ಸರ್ಕಾರವು ತೀರ್ಮಾನಿಸಿ ಈ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸಲು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2000, ಬೆಂಗಳೂರು, ದಿನಾಂಕ: 1ನೇ ಜುಲೈ 2004**

ಪ್ರಸ್ತಾವನೆಯನ್ನು ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ದಯಾನಂದ ಮುಖ್ಯ ಇಂಜಿನಿಯರ್, ಅವರ ವಿರುದ್ಧ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು, ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರಿಗೆ, ರೂ. 5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ನೀಡಲಾಗುವುದು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಲ್ಲಿ ನಿಗದಿಪಡಿಸಿರುವಂತೆ ಅವರು ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡೆಪ್ಯುಟಿ ಚೀಫ್ ಇಂಜಿನಿಯರ್ (ಆಡಳಿತ) ಮುಖ್ಯ ಅಭಿಯಂತರರು (ನೀರಾವರಿ) (ದಕ್ಷಿಣ) ರವರ ಕಛೇರಿ, ಮೈಸೂರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಶೀಘ್ರಲಿಪಿಗಾರರ, ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಮುಖ್ಯ ಅಭಿಯಂತರರು (ಡಬ್ಲ್ಯೂ.ಆರ್.ಡಿ.ಓ.) ಆನಂದರಾವ್ ವೃತ್ತ, ಬೆಂಗಳೂರು ರವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳೊಳಗಾಗಿ ಕಡ್ಡಾಯವಾಗಿ ಮುಗಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 862

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು-3)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಸ್. ಶ್ರೀಧರ್‌ಭಟ್ಟರ್ ಪಾಂಚಾರಾತ್ರಾಗಮ ಪ್ರಾಧ್ಯಾಪಕರು ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು ಮೈಸೂರುರವರ ರಾಜಿನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಧಾರ್ಮಿಕ ದತ್ತಿ ಆಯುಕ್ತರು ಪತ್ರ ಸಂಖ್ಯೆ.ಸಿಬ್ಬಂದಿ 1 ಸಿಆರ್ 145/03-04 ದಿನಾಂಕ:1.3.2004 ಮತ್ತು 23.3.2004.

**ಪ್ರಸ್ತಾವನೆ:**

ಮೈಸೂರಿನ ಮಹಾರಾಜ ಸರ್ಕಾರಿ ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀ ಎಸ್. ಶ್ರೀಧರ್‌ಭಟ್ಟರವರು ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 170 ಮುಸೇವಿ 97 ದಿನಾಂಕ:15.11.97 ರನ್ವಯ ದಿನಾಂಕ:6.6.96 ರಿಂದ ಗ್ರೂಪ್ 'ಬಿ' ಸಹಾಯಕ ಪ್ರಾಧ್ಯಪಕರಾಗಿ ಹಾಗೂ ದಿನಾಂಕ:16.6.2003 ರಿಂದ ಗ್ರೂಪ್ 'ಎ' ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಶ್ರೀ ಎಸ್. ಶ್ರೀಧರಭಟ್ಟರ್‌ರವರು ದಿನಾಂಕ:12.1.2004 ರಿಂದ 25.2.2004ರವರೆಗೆ ಗಳಿಕೆ ರಜೆ ಮಂಜೂರು ಮಾಡಲು ಕೋರಿದಂತೆ ಪ್ರಾಂಶುಪಾಲರು ಮಹಾರಾಜ ಸರ್ಕಾರಿ ಸಂಸ್ಕೃತ ಕಾಲೇಜು ಮೈಸೂರುರವರು ಸದರಿಯವರು ಈ ಅವಧಿಗೆ ಗಳಿಕೆ ರಜೆ ಮಂಜೂರು ಮಾಡಿ ಅವರನ್ನು ಪ್ರಾಧ್ಯಾಪಕರ ಹುದ್ದೆಯಿಂದ ದಿನಾಂಕ:12.1.2004 ರಂದು ಬಿಡುಗಡೆಗೊಳಿಸಿರುತ್ತಾರೆ. ಶ್ರೀ ಎಸ್. ಶ್ರೀಧರಭಟ್ಟರ್‌ರವರು ದಿನಾಂಕ:3.2.2004ರಂದು ತಮ್ಮ ಹುದ್ದೆಗೆ ರಾಜಿನಾಮೆಯನ್ನು ನೀಡಿ ದಿನಾಂಕ:3.2.2004 ರಿಂದ ಅಂಗೀಕರಿಸಲು ಕೋರಿರುತ್ತಾರೆಂದು, ಸದರಿಯವರ ವಿರುದ್ಧ ಇಲಾಖಾ ವಿಚಾರಣೆಗಳಾಗಲಿ ಅಥವಾ ಯಾವುದೇ ರೀತಿಯ ಮೊಕದ್ದಮೆಗಳಾಗಲಿ ಹಾಗೂ ಯಾವುದೇ ವಿಧವಾದ ಹಣಕಾಸಿನ ಬೇಬಾಕಿಯನ್ನು ಹೊಂದಿಲ್ಲವೆಂದು ಪ್ರಾಂಶುಪಾಲರು ವರದಿ ಮಾಡಿರುವುದನ್ನು ಉಲ್ಲೇಖಿಸುತ್ತಾ ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 20 ಎಸ್‌ಡಿಇ 86 ದಿನಾಂಕ:3.4.90 ರನ್ವಯ ಸರ್ಕಾರಿ ನೌಕರನು ರಜೆಯಲ್ಲಿದ್ದಾಗ ರಾಜಿನಾಮೆ ಸಲ್ಲಿಸಿದಲ್ಲಿ ರಜೆ ಮುಕ್ತಾಯವಾದ ದಿನಾಂಕದಿಂದ ರಾಜಿನಾಮೆ ಅಂಗೀಕರಿಸಬಹುದಾಗಿರುತ್ತಿದ್ದೆಂದು ಪ್ರಸ್ತುತ ಶ್ರೀ ಎಸ್. ಶ್ರೀಧರಭಟ್ಟರರವರಿಗೆ ದಿನಾಂಕ:12.1.2004ರಿಂದ 25.2.2004ರವರೆಗೆ ಗಳಿಕೆ ರಜೆ ಮಂಜೂರು ಮಾಡಿದ್ದು, ದಿನಾಂಕ:26.2.2004ರಿಂದ ಅವರ ರಾಜಿನಾಮೆಯನ್ನು ಅಂಗೀಕರಿಸಿ ಆದೇಶ ಹೊರಡಿಸುವಂತೆ ಕೋರಿ ಮೇಲೆ ಓದಲಾದ ಪತ್ರಗಳಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 49 ಮುಸೇವಿ 2004, ಬೆಂಗಳೂರು, ದಿನಾಂಕ: 31ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಎಸ್. ಶ್ರೀಧರ್‌ಭಟ್ಟರ್ ಪಾಂಚಾರಾತ್ರಾಗಮ ಪ್ರಾಧ್ಯಾಪಕರು ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು ಮೈಸೂರುರವರು ದಿನಾಂಕ:3.2.2004ರಂದು ತಮ್ಮ ಹುದ್ದೆಗೆ ಸಲ್ಲಿಸಿದ ರಾಜಿನಾಮೆಯನ್ನು ಸದರಿಯವರಿಗೆ ದಿನಾಂಕ:12.1.2004 ರಿಂದ 25.2.2004ರವರೆಗೆ ಮಂಜೂರು ಮಾಡಿದ ಗಳಿಕೆ ರಜೆ, ಮುಕ್ತಾಯವಾದ ನಂತರದ ದಿನಾಂಕ: 26.2.2004 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

ಪಿ.ಆರ್. 863

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಸ್. ರಮೇಶ್, ವಕೀಲರು, ಬೆಂಗಳೂರು (ನಗರ) ಇ ವರನ್ನು ಶ್ರೀ ಜೆ. ನಾಗರಾಜ, ನೋಟರಿ, ಬೆಂಗಳೂರು (ನಗರ) ಇ ವರ ರಾಜೀನಾಮೆಯಿಂದ ತೆರವಾದ ಸ್ಥಾನದಲ್ಲಿ ಬೆಂಗಳೂರು (ನಗರ) ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ನೋಟರಿಯಾಗಿ ನೇಮಕ ಮಾಡುವ ಬಗ್ಗೆ-- ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 68 ಎಲ್‌ಸಿಎಲ್ 2003 ದಿನಾಂಕ:03.12.2003.
2. ಸರ್ಕಾರಿ ಪತ್ರ ಸಂಖ್ಯೆ: ಲಾ 68 ಎಲ್‌ಸಿಎಲ್ 2003 ದಿನಾಂಕ: 18.12.03.
3. ಪ್ರಧಾನ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು(ನಗರ) ಇ ವರ ಪತ್ರ ದಿನಾಂಕ:26.06.2004.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ದಿನಾಂಕ: 03.12.03ರ ಸರ್ಕಾರಿ ಆದೇಶದಲ್ಲಿ ಶ್ರೀ ಜೆ. ನಾಗರಾಜ್, ವಕೀಲರು, ಇ ವರು ನೋಟರಿ ಹುದ್ದೆಗೆ ನೀಡಿದ್ದ ರಾಜೀನಾಮೆಯನ್ನು ದಿನಾಂಕ: 07.04.2003ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾಗಿರುವ ದಿನಾಂಕ: 18.12.03ರ ಸರ್ಕಾರಿ ಪತ್ರದಲ್ಲಿ, ರಾಜೀನಾಮೆ ಅಂಗೀಕಾರದಿಂದ ತೆರವಾದ ನೋಟರಿ ಹುದ್ದೆಯ ನೇಮಕಾತಿಗಾಗಿ ಅರ್ಹ ವಕೀಲರುಗಳಿಂದ ಅರ್ಜಿಗಳನ್ನು ಆಹ್ವಾನಿಸಿ ನಿಯಮಾನುಸಾರ ಪರಿಶೀಲಿಸಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಪ್ರಧಾನ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇ ವರನ್ನು ಕೋರಲಾಗಿತ್ತು.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ:26.06.04ರ ಪತ್ರದಲ್ಲಿ ಬೆಂಗಳೂರು(ನಗರ) ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಇ ವರು ಅರ್ಜಿಗಳನ್ನು ಆಹ್ವಾನಿಸಿ ನೋಟರಿ ನಿಯಮಾವಳಿಯ ರೀತ್ಯ ಪರಿಶೀಲಿಸಿ 15 ಜನ ವಕೀಲರ ಮೆಮೋರಿಯಲ್ಸ್‌ಗಳನ್ನು ಸದರಿ ನೋಟರಿ ಹುದ್ದೆಯ ನೇಮಕಾತಿಗಾಗಿ ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 5 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಸ್. ರಮೇಶ್, ವಕೀಲರು, 7ನೇ ಮೇನ್, ಹೆಚ್.ಎ.ಎಲ್ 2ನೇ ಹಂತ, ಬೆಂಗಳೂರು 560 008 ಇ ವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು (ನಗರ) ಕಂದಾಯ ತಾಲ್ಲೂಕು ಕ್ಷೇತ್ರದ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು ``0070 ಇ ತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇ ತರೆ ಸ್ವೀಕೃತಿಗಳು-06 ಇ ತರೆ ಬಾಬ್ತುಗಳು `` ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1,000.00 (ರೂ.ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ``ನೋಟರಿ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು``.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಈಶ್ವರ ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, ಆಡಳಿತ-2

ಪಿ.ಆರ್. 864

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಮುನಿನಂಜಪ್ಪ, ಮಾಜಿ ಹೆಚ್‌ಸಿ 1469, ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಉಪ ಪೊಲೀಸ್ ಕಮೀಷನರ್, ಪಶ್ಚಿಮ ವಿಭಾಗ, ಬೆಂಗಳೂರು ರವರ ಆದೇಶ ಸಂಖ್ಯೆ: 23/ಡಿಇ /ಆರ್6/95 ದಿನಾಂಕ:22-12-95.
2. ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರುರವರ ಆದೇಶ ಸಂಖ್ಯೆ:ಅಪೀಲು/2001-02 ಓಬಿ ಸಂ.415/2002 ದಿನಾಂಕ:3-5-2002.

3. ಅರ್ಜಿದಾರರ ಮನವಿ ದಿನಾಂಕ:30-8-2002.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(2) 36/2001-02 ದಿನಾಂಕ:10-10-2002.

**ಪ್ರಸ್ತಾವನೆ:**

ಶ್ರೀ ಮುನಿನಂಜಪ್ಪ, ಹೆಚ್‌ಸಿ 1469, ಬೆಂಗಳೂರು ನಗರ ರವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದಿನಾಂಕ:4-10-94ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಆರೋಪದ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರ ನಿಯಮ 6ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

ಅರ್ಜಿದಾರರು ಇ ಲಾಖಾ ವಿಚಾರಣೆಯಲ್ಲಿ ಸಹಕರಿಸದೇ ಇ ದ್ದುದರಿಂದ ಏಕಪಕ್ಷೀಯವಾಗಿ ನಿರ್ಣಯ ಕೈಗೊಂಡು ಆರೋಪ ಸಾಬೀತಾಗಿದೆ ಎಂಬ ವರದಿಯ ಆಧಾರದ ಮೇಲೆ ಶಿಸ್ತು ಪ್ರಾಧಿಕಾರಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಇ ವರ ಮೇಲ್ಮನವಿ ತಿರಸ್ಕೃತವಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು, ಕೌಟುಂಬಿಕ ಕಾರಣಗಳಿಂದಾಗಿ ಹಾಗೂ ಅನಾರೋಗ್ಯದ ಕಾರಣದಿಂದ ತಾನು ಕರ್ತವ್ಯಕ್ಕೆ ಹಾಜರಾಗಲಿಲ್ಲ. ವೈದ್ಯಕೀಯ ಪ್ರಮಾಣಪತ್ರಗಳನ್ನು ಸಲ್ಲಿಸಿದ್ದರೂ ಅದನ್ನು ಪರಿಗಣಿಸಿಲ್ಲ ಎಂದು ವಾದಿಸಿರುತ್ತಾರೆ. ಅವರ ವಾದಾಂಶಗಳಲ್ಲಿ ಪರಿಗಣಿಸಬಹುದಾದ ಅಂಶಗಳಿಲ್ಲದಿದ್ದರೂ, ಅವರು ಸುಮಾರು 25 ವರ್ಷಗಳ ಸುದೀರ್ಘವಾದ ಸೇವೆಯನ್ನು ಸಲ್ಲಿಸಿದ್ದು, ಅವರಿಗೆ ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಹೆಚ್ಚಿನದೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 171 ಪೊಸಿಅ 2002, ಬೆಂಗಳೂರು, ದಿನಾಂಕ: 30ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮುನಿನಂಜಪ್ಪ, ಹೆಚ್‌ಸಿ 1469, ಬೆಂಗಳೂರು ರವರಿಗೆ ಶಿಸ್ತು ಪ್ರಾಧಿಕಾರಿ ತಮ್ಮ ಆದೇಶ ಸಂಖ್ಯೆ:23/ಡಿಇ /ಆರ್6/95 ದಿನಾಂಕ:22-12-95ರಲ್ಲಿ ಸದರಿಯವರನ್ನು ಸೇವೆಯಿಂದ ವಜಾ ಮಾಡಲಾಗಿದ್ದು ಈ ದಂಡನೆಯನ್ನು ಭಾಗಶ: ಮಾರ್ಪಡಿಸಿ ಕರ್ನಾಟಕ ರಾಜ್ಯ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 23(1)(ಬಿ)(ii)ರಲ್ಲಿನ ದಂಡನೆಯಾದ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶವು ದಿನಾಂಕ:22-12-95ರಿಂದಲೇ ಜಾರಿಗೆ ಬರುತ್ತದೆ. ಉಳಿದಂತೆ ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿನ ಉಳಿದ ಭಾಗಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಈ ಆದೇಶವನ್ನು ಕೆ.ಪಿ.ಎಸ್.ಸಿ. ರವರ ಪತ್ರ ಸಂಖ್ಯೆ:ಪಿಎಸ್‌ಸಿ 26 ಸಿಎಸ್‌ಎಸ್ 2004 ದಿನಾಂಕ:17-6-2004ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 865

**FOREST, ECOLOGY AND ENVIRONMENT SECRETARIAT**

**CIRCULAR**

**No. FEE 41 FAD 2004, Bangalore, Dated 5th August 2004**

**Sub:** Grant of felling permission in Bane lands of Kodagu District.

Instances have come to the notice of the Government where felling permission has been given by the Deputy Conservator of Forests, Madikeri Division in respect of trees grown on Bane lands on recovery of seigniorage value of the timber and firewood obtained from the trees. It is learnt that the Deputy Conservator of Forests, Madikeri has issued these felling permissions on the basis of the Government Order No. FEE 277 FDP 94(ii), dated 2.11.1998. The said Government Order was issued in order to give monetary incentive to the owners of unredeemed lands where the value of the trees had not been paid to the Government.

It is hereby clarified that unredeemed lands constitute a sub-set of lands under sagu tenure and the above Government Order dated 2.11.1998 is applicable to only unredeemed lands. The word 'unredeemed' cannot and should not be interpreted to include any land tenure other than sagu tenure. As such the above Government Order cannot be made applicable to Bane lands which are Government lands with certain limited privileges vested in the holders of the Bane lands.

**K.V. JAYALAKSHMI**
Under Secretary to Government,
Forest, Ecology and Environment Department

P.R. 868